# ''ಪತ್ರೀಜಿ ವಾಣಿ''

## ''ಪ್ರಪಂಚವು ಬದಲಾಗುತ್ತಿದೆ!''

ಪ್ರಿಯ ಪಿರಮಿಡ್ ಮಾಸ್ಟರ್‌ಗಳೇ ಮತ್ತು ಮಿತ್ರರೇ!

ಪ್ರಪಂಚವು ಬದಲಾಗುತ್ತಿದೆ
ಪ್ರಪಂಚವು ಪರಿವರ್ತನೆಗೊಳ್ಳುವ ಪ್ರಕ್ರಿಯೆಯಲ್ಲಿದೆ
ಪ್ರಪಂಚವು ಅಗಾಧ ಬದಲಾವಣೆಯಾಗುವ ಹಾದಿಯಲ್ಲಿ ಪಯಣಿಸುತ್ತಿದೆ.

ಈಗ, ಒಂದು ಜಾಗತಿಕ ಮಾಹಿತಿ ಕ್ರಾಂತಿ ಉಂಟಾಗಿದೆ
ಈಗ, ಒಂದು ಜಾಗತಿಕ ಸಂಪರ್ಕ ಕ್ರಾಂತಿ ಉಂಟಾಗಿದೆ
ಈಗ, ಒಂದು ಜಾಗತಿಕ ಕಂಪ್ಯೂಟರ್ ಕ್ರಾಂತಿ ಉಂಟಾಗಿದೆ
ಮತ್ತು, ಅವೆಲ್ಲಕ್ಕೂ ಮೇಲಾಗಿ, ಈಗ, ಒಂದು ಆಧ್ಯಾತ್ಮಿಕ ಕ್ರಾಂತಿ ಉಂಟಾಗಿದೆ

ಈ ಎಲ್ಲಾ ಕ್ರಾಂತಿಗಳು ಒಟ್ಟಾಗಿ ಹೊಸ ಮಾನವತೆಯನ್ನು ಸೃಷ್ಟಿಸುತ್ತಿವೆ
ನಿನ್ನೆಯ ಮಾನವತೆಯು ಇಂದಿನ ಮಾನವತೆ ಇದ್ದಂತೆಯೇ ಇಲ್ಲ
ಇಂದಿನ ಮಾನವತೆಯು ನಾಳೆಯ ಮಾನವತೆಯಂತೆ ಇರುವುದಿಲ್ಲ

ಎಲ್ಲಾ ಜನತೆಯ ಮೇಲೆ ಕರ್ಮದ ನಿಯಮವು ತಕ್ಷಣದಲ್ಲಿಯೇ ಪ್ರಭಾವ ಬೀರುತ್ತಿದೆ
ಆಶಯಗಳು ರಾತೋರಾತ್ರಿ ವಾಸ್ತವವಾಗುತ್ತಿವೆ
ಇವೆಲ್ಲವೂ ಸಹ ಆಸ್ಟ್ರಲ್ ಮಾಸ್ಟರ್‌ಗಳ ಬಯಕೆಯಾಗಿದೆ
ಆದ್ದರಿಂದ, ಅವರಂತೆ ಇರೋಣ!

– ಬ್ರಹ್ಮರ್ಷಿ ಪತ್ರೀಜಿ

# ಧ್ಯಾನ ಕಸ್ತೂರಿ



ಬ್ರಹ್ಮರ್ಷಿ ಸುಭಾಷ್ ಪತ್ರೀಜಿ
ಸಂಸ್ಥಾಪಕರು



ಶ್ರೀ ಎ. ಸತ್ಯನಾರಾಯಣ
ಸಂಪಾದಕರು



ಸಂತೋಷ್
ನಿರ್ವಾಹಕರು



ಅನಿತ
ನಿರ್ವಾಹಕರು



ಹರೀಶ್
ತಾಂತ್ರಿಕತೆ ಮತ್ತು ವಿನ್ಯಾಸ



ಅಯ್ಯಪ್ಪ
ತಾಂತ್ರಿಕತೆ ಮತ್ತು ವಿನ್ಯಾಸ



**ಮುದ್ರಕರು ಹಾಗೂ ಪ್ರಕಾಶಕರು :**
**ಕರ್ನಾಟಕ ಪಿರಮಿಡ್ ಧ್ಯಾನ ಪ್ರಚಾರ ಟ್ರಸ್ಟ್(ರಿ)**
ನಂ. 126, ಪಿರಮಿಡ್ ಭವನ್, 2ನೇ ಮಹಡಿ, 7ನೇ ಮುಖ್ಯ ರಸ್ತೆ,
4ನೇ ಬಡಾವಣೆ, ಜಯನಗರ, ಬೆಂಗಳೂರು - 560 011
ದೂರವಾಣಿ : 080-26646899, 9481359920, 9902761761

ಪ್ರಿಂಟರ್ಸ್ : ಡಾಟ್ಸ್ ಇನೋವೇಟಿವ್ ಪ್ರಿಂಟರ್ಸ್, ಸುಲ್ತಾನ್ ಪೇಟೆ, ಬೆಂಗಳೂರು

www.pssmovement.org

## ಪ ರಿ ವಿ ಡಿ

| | |
|---|---|
| ಪತ್ರೀಜಿ ವಾಣಿ | 1 |
| ಪರಿವಿಡಿ | 2 |
| ಸಂಪಾದಕೀಯ | 3 |
| ಧ್ಯಾನದ ವಿಧಾನ ಮತ್ತು ಏಕತಾ ಧ್ಯಾನ | 4 |
| ಎನ್‌ಲೈಟನ್‌ಮೆಂಟ್ | 5 |
| ನ್ಯೂಟನ್‌ರವರ ಇಂಟರ್‌ವ್ಯೂ | 9 |
| ಮಾನಸಸರೋವರ ಧ್ಯಾನ ಯಾತ್ರೆ | 13 |
| ಪಿರಮಿಡ್ ವ್ಯಾಲಿಯಲ್ಲಿ ಪತ್ರೀಜಿ | 17 |
| ಭೀಮೇಶ್ ಕಲಂ ಟು ಕಾಲಂ | 20 |
| ಶಾಪಗಳು-ವರಗಳು | 23 |
| G.C.S.S | 25 |
| ಯೂತ್ ಕಾಲಂ | 34 |
| ಪ್ರಾಣಿಗಳು | 36 |
| ಪಿರಮಿಡ್ ಧ್ಯಾನ | 37 |
| ಪುಸ್ತಕ ಪರಿಚಯ | 40 |
| ಧ್ಯಾನಾನುಭವ | 41 |
| ಸರ್ವಜ್ಞ | 42 |
| ಸಿನಿಮಾ | 44 |
| ಅನ್ನದಾನ | 45 |
| ಮುಗುಳ್ನಗೆ | 46 |
| ಕರ್ನಾಟಕ ಪಿರಮಿಡ್ ಧ್ಯಾನ ಪ್ರಚಾರ ಟ್ರಸ್ಟ್... | 47 |

E-mail : dhyanakasturi@gmail.com





## ಸಂಪಾದಕೀಯ

2012ರಲ್ಲಿ ಭೂಮಿಯ ಮೇಲೆ ಆಗಲಿರುವ ಬದಲಾವಣೆ ಕುರಿತು ಎಲ್ಲೆಡೆಯಲ್ಲಿಯೂ ಚರ್ಚೆ ಹೆಚ್ಚುತ್ತಿದ್ದೆ. ಮಾಧ್ಯಮಗಳು ತಮ್ಮದೇ ರೀತಿಯಲ್ಲಿ ಮುಂಬರುವ ಘಟನೆಗಳನ್ನು ಅರ್ಥೈಸುತ್ತಿವೆ. ವೈಜ್ಞಾನಿಕ ಆಧಾರಗಳನ್ನು ಉಲ್ಲೇಖಿಸಿ ಪ್ರಚಾರ ನಡೆದಿದೆ. ವಿಜ್ಞಾನಿಗಳ ಹೇಳಿಕೆಗಳಿಂದಾಗಿ, ಇವುಗಳನ್ನು ಜನರು ನಂಬುತ್ತಿದ್ದಾರೆ. ಏನೆಲ್ಲಾ ಆಗಬಹುದು ಎಂಬುದನ್ನು ಆಧಾರಗಳ ಹಿನ್ನೆಲೆಯಲ್ಲಿ ಊಹಿಸುತ್ತಿದ್ದಾರೆ. ಆದರೆ, ಯೋಗಿಗಳು, ದಾರ್ಶನಿಕರು, ಜ್ಞಾನೋದಯ ಪಡೆದ ಮಾಸ್ಟರ್‌ಗಳು ಮಾತ್ರ ಈ ಹಿಂದೆಯೇ ಇವುಗಳನ್ನು ಮನಗಂಡಿದ್ದಾರೆ.

ಮನುಕುಲದ ಒಳಿತಿಗಾಗಿ ಎಲ್ಲರೂ ಒಳ್ಳೆಯ ಕರ್ಮಗಳನ್ನೇ ಮಾಡಬೇಕು, ಸನ್ಮಾರ್ಗದಲ್ಲಿ ನಡೆಯದಿದ್ದರೆ, ಸದ್ಗತಿಯು ದೊರೆಯುವುದಿಲ್ಲ ಎಂಬುದು ಇಂದು ಕೇವಲ ಒಂದು ನಂಬಿಕೆಯಾಗಿ ಉಳಿದಿಲ್ಲ. ಕರ್ಮ ಸಿದ್ಧಾಂತದ ಪ್ರಕಾರ ದೊರೆಯಬೇಕಾದ ಫಲಾಫಲಗಳು ಅತಿ ಶೀಘ್ರದಲ್ಲಿಯೇ ಈಗ ದೊರೆಯುತ್ತಿವೆ. ಈ ಪ್ರಪಂಚವು ಬದಲಾವಣೆಯ ಪ್ರಕ್ರಿಯೆಯಲ್ಲಿ ಇದ್ದು, ಕೊನೆಯ ಘಟ್ಟಕ್ಕೆ ಬಂದಿದೆ. ಆಧ್ಯಾತ್ಮಿಕ ಕ್ರಾಂತಿಯಿಂದ ಮಾತ್ರ ಮನುಕುಲದ ಉದ್ಧಾರ ಸಾಧ್ಯ - ಇವು ಹೊಸ ಯುಗದ ಎಲ್ಲಾ ಆಧ್ಯಾತ್ಮಿಕ ವಿಜ್ಞಾನಿಗಳ, ಯೋಗಿಗಳ, ಜ್ಞಾನೋದಯ ಪಡೆದ ಮಾಸ್ಟರ್‌ಗಳ ಏಕಾಭಿಪ್ರಾಯವಾಗಿದೆ. ಇದೇ ಅಭಿಪ್ರಾಯವನ್ನು ಹೊಂದಿರುವ, ಅನೇಕ ಆಧ್ಯಾತ್ಮಿಕ ಸಾಧಕರು ಕಳೆದ ತಿಂಗಳು ಪಿರಮಿಡ್ ವ್ಯಾಲಿಯಲ್ಲಿ ಒಂದೇ ವೇದಿಕೆಯಲ್ಲಿ ಸೇರಿ ತಮ್ಮ ಅನುಭವಗಳನ್ನು ಪರಸ್ಪರ ಹಂಚಿಕೊಂಡರು.

ಆಧ್ಯಾತ್ಮಿಕ ವಿಜ್ಞಾನಿಗಳ ಜಾಗತಿಕ ಸಮ್ಮೇಳನದ ವಿಸ್ತಾರವಾದ ವರದಿಯು ತಮಗಾಗಿ ಈ ಸಂಚಿಕೆಯಲ್ಲಿ ಪ್ರಕಟಗೊಂಡಿದೆ. ಕೈಲಾಸ ಮಾನಸ ಸರೋವರದ ಧ್ಯಾನ ಯಾತ್ರೆಯ ಒಂದು ಮನೋಜ್ಞ ವರದಿಯೂ ಸಹ ಈ ಸಂಚಿಕೆಯಲ್ಲಿದೆ. ಇನ್ನುಳಿದಂತೆ, ಪತ್ರೀಜಿಯವರ ಪಿರಮಿಡ್ ವ್ಯಾಲಿ ಭೇಟಿ ಹಾಗೂ ಅವರ ಜ್ಞಾನ ಬೋಧೆಗಳು ಇಲ್ಲಿವೆ. ಧ್ಯಾನ ಮಾರ್ಗದ ಮೂಲಕವೇ ಜನಸಾಮಾನ್ಯರು ಸಹ ಮುಂದಿನ ಜಾಗತಿಕ ಬದಲಾವಣೆಗಳನ್ನು ಎದುರಿಸಬೇಕು ಎಂಬುದು ಎಲ್ಲರ ಆಶಯವಾಗಿದೆ. ಸ್ವತಃ ಹೆಚ್ಚು ಹೆಚ್ಚು ಧ್ಯಾನ ಮಾಡೋಣ ಮತ್ತು ಧ್ಯಾನ ಪ್ರಚಾರ ಮಾಡೋಣ ಎಂಬ ಸಂಕಲ್ಪದೊಂದಿಗೆ ಮುನ್ನಡೆಯಬೇಕಾದುದು ಎಲ್ಲಾ ಪಿರಮಿಡ್ ಮಾಸ್ಟರ್‌ಗಳ ಕರ್ತವ್ಯವಾಗಿದೆ. ವಂದನೆಗಳು.

ಎ. ಸತ್ಯನಾರಾಯಣ

ವಿಳಾಸ: ನಂ.958, 2ಜಿ ಕ್ರಾಸ್, 1ನೇ ಬ್ಲಾಕ್
ಹೆಚ್.ಆರ್.ಬಿ.ಆರ್. ಬಡಾವಣೆ
ಕಲ್ಯಾಣನಗರ, ಬೆಂಗಳೂರು 560 043
ದೂ: 080-25427145, 9448883872
ಇ-ಮೇಯ್ಲ್: sathyaasn@gmail.com

## ಆಧ್ಯಾತ್ಮಿಕ ವಿಜ್ಞಾನಿಗಳ ಜಾಗತಿಕ ಸಮ್ಮೇಳನ

ಪ್ರಪಂಚದ ಆಧ್ಯಾತ್ಮಿಕ ವಿಜ್ಞಾನಿಗಳು ಮತ್ತು ಹೊಸಯುಗದ ಆಧ್ಯಾತ್ಮಿಕ ಮಾಸ್ಟರ್‌ಗಳು ತಮ್ಮ ಆಧ್ಯಾತ್ಮಿಕ ಕಾಣ್ಕೆಗಳು, ಸಂಶೋಧನೆಗಳು ಮತ್ತು ಅನುಭವಗಳನ್ನು ಪರಸ್ಪರ ವಿನಿಮಯ ಮಾಡಿಕೊಳ್ಳುವ ಉದ್ದೇಶದಿಂದ, ಅವರೆಲ್ಲರನ್ನು ಒಂದೇ ವೇದಿಕೆಯಲ್ಲಿ ಸೇರಿಸಲು ''ಆಧ್ಯಾತ್ಮಿಕ ವಿಜ್ಞಾನಿಗಳ ಜಾಗತಿಕ ಸಮ್ಮೇಳನ''ವನ್ನು ಪ್ರತಿ ವರ್ಷವೂ ಸಹ ಸಂಘಟಿಸಲಾಗುತ್ತಿದೆ. ಕಳೆದ ವರ್ಷದ ಡಿಸೆಂಬರ್ ಕೊನೆಯಲ್ಲಿ ಮೊದಲ ಸಮ್ಮೇಳನವು ನಡೆಯಿತು. ಈ ವರ್ಷ ಅಕ್ಟೋಬರ್ 2ರಿಂದ 5ರವರೆಗೆ ಎರಡನೆಯ ಸಮ್ಮೇಳನವು ನಡೆಯಿತು. ''ಆಧ್ಯಾತ್ಮಿಕ ಕ್ರಾಂತಿಯ ಮೂಲಕ ಭೂಮಿಯ ವಿಕಾಸ'' ಎಂಬುದು ಈ ಸಮ್ಮೇಳನದ ಧ್ಯೇಯ ವಾಕ್ಯವಾಗಿತ್ತು.

2012ರ ಹೊತ್ತಿಗೆ 'ಧ್ಯಾನ ಜಗತ್'ನ್ನು ಸಾಧಿಸುವುದು ಮತ್ತು ಪ್ರತಿಯೊಬ್ಬ ವ್ಯಕ್ತಿಯನ್ನೂ ಸಹ 'ಆನಾಪಾನಸತಿ ಧ್ಯಾನಿ'ಯನ್ನಾಗಿಸುವುದೇ ಪಿರಮಿಡ್ ಸ್ಪಿರಿಚ್ಯುವಲ್ ಸೊಸೈಟೀಸ್ ಮೂವ್‌ಮೆಂಟ್‌ನ ಮೂಲ ಉದ್ದೇಶವಾಗಿದೆ. ಜಗತ್ತಿನಾದ್ಯಂತ ಇರುವ, ಹಲವಾರು ಹೊಸಯುಗದ ಮಾಸ್ಟರ್‌ಗಳು , ಇಂಥದೇ ಉದ್ದೇಶವನ್ನು ಇಟ್ಟುಕೊಂಡು ವ್ಯಕ್ತಿಗತವಾಗಿ ಕೆಲಸ ಮಾಡುತ್ತಿದ್ದಾರೆ. ಅವರೆಲ್ಲರ ವ್ಯಕ್ತಿಗತ ಜೀವನದ ರೂಪಾಂತರವು ಆಧ್ಯಾತ್ಮಿಕದ ಮೂಲಕ ಹೇಗೆ ಆಯಿತು ಎಂಬ ರಹಸ್ಯಗಳನ್ನು ತಿಳಿಯಲು ಈ ಸಮ್ಮೇಳನವು ಒಂದು ಸುವರ್ಣಾವಕಾಶ. ಇವುಗಳನ್ನು ತಿಳಿದುಕೊಳ್ಳುವುದರಿಂದ ಜಗತ್ತಿನತ್ತ ಹೊಸ ದೃಷ್ಟಿಕೋನವನ್ನು ಬೆಳೆಸಿಕೊಳ್ಳಲು ನಾವೂ ಸಹ ಸ್ಫೂರ್ತಿಹೊಂದಬಹುದು. ಆಧ್ಯಾತ್ಮಿಕ ಪ್ರತಿಸ್ಪಂದನಗಳ ಮೂಲಕ ನಮ್ಮನ್ನು ನಾವು ಅರಿತುಕೊಳ್ಳುವ ಶಿಕ್ಷಣವು ಎಂದಿಗಿಂತಲೂ ಈಗ ಅತ್ಯಗತ್ಯವಾಗಿದೆ. ಎಲ್ಲರ ಆಧ್ಯಾತ್ಮಿಕ ಪ್ರಗತಿಗಾಗಿ ಇದು ಅವಶ್ಯಕ. ಆಧ್ಯಾತ್ಮಿಕ ಸಮ್ಮೇಳನವು ಇಂತಹ ಪ್ರಯತ್ನಗಳಲ್ಲಿ ಪ್ರಮುಖವಾದುದು.

ಪ್ರತಿ ವರ್ಷವೂ ನಡೆಯಲಿರುವ ಈ ಜಾಗತಿಕ ಸಮ್ಮೇಳನದಲ್ಲಿ ಜಗತ್ತಿನಾದ್ಯಂತ ಇರುವ, ಜೀವನದ ವಿವಿಧ ಕ್ಷೇತ್ರಗಳ ಹಲವಾರು ಆಧ್ಯಾತ್ಮಿಕ ಸಾಧಕರು ಪಾಲ್ಗೊಳ್ಳುತ್ತಾರೆ. ಸಾಧನೆಯ ಉತ್ತುಂಗವನ್ನು ಏರಿರುವ ಅವರೆಲ್ಲರ ವೈಯಕ್ತಿಕ ಸಾಧನೆಗಳ ವಿವರಗಳು ಮತ್ತು ಅವರ ಆಧ್ಯಾತ್ಮಿಕ ವಿವೇಕವನ್ನು ನಾವೂ ಸಹ ಪಡೆದು, ಅವೆಲ್ಲವನ್ನೂ ನಮ್ಮ ಜೀವನದಲ್ಲಿ ಅಳವಡಿಸಿಕೊಳ್ಳುವ ಮೂಲಕ ಆಧ್ಯಾತ್ಮಿಕ ಪ್ರಗತಿಯನ್ನು ಸಾಧಿಸಬಹುದು.

ಇಂತಹ ಸಮ್ಮೇಳನದಲ್ಲಿ ಪ್ರತಿನಿಧಿಗಳಾಗಿ ಭಾಗವಹಿಸುವವರಿಗೆ ಹಲವು ಲಾಭಗಳು ಇವೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ; 2012 ಮತ್ತು ಅದರ ನಂತರದ ಘಟನೆಗಳನ್ನು ಅರ್ಥೈಸಿಕೊಳ್ಳಬಹುದು. ತಮ್ಮ ಜೀವನದ ಉದ್ದೇಶವನ್ನು ತಿಳಿದುಕೊಳ್ಳಬಹುದು. ನಮ್ಮೊಳಗೇ ಇರುವ ರೋಗ ಉಪಶಮನ ಗುಣವನ್ನು ತಿಳಿದುಕೊಳ್ಳಬಹುದು. ನಮ್ಮ ಪ್ರಾಣಶಕ್ತಿಯನ್ನು ಹೆಚ್ಚಿಸಿಕೊಳ್ಳುವ ಉಪಾಯಗಳನ್ನು ತಿಳಿದುಕೊಳ್ಳಬಹುದು. ಪರಿಣಾಮಕಾರಿಯಾಗಿ ಧ್ಯಾನ ಮಾಡುವುದನ್ನು ತಿಳಿದುಕೊಳ್ಳಬಹುದು.

- ಬ್ರಹ್ಮರ್ಷಿ ಪತ್ರೀಜಿ



# ಆನಾಪಾನಸತಿ ಧ್ಯಾನ



**ಧ್ಯಾನದ ವಿಧಾನ :** ಸುಖಾಸನದಲ್ಲಿ ಹಾಯಾಗಿ ಕುಳಿತುಕೊಂಡು, ಎರಡೂ ಕೈ ಬೆರಳುಗಳನ್ನು ಪರಸ್ಪರ ಜೋಡಿಸಿಕೊಂಡು, ಕಣ್ಣೆರಡೂ ಮುಚ್ಚಿ ಸಹಜವಾಗಿ ನಡೆಯುತ್ತಿರುವ ಉಸಿರಾಟವನ್ನು ಗಮನಿಸುತ್ತಿರಬೇಕು. ಯಾವ ಮಂತ್ರ, ಜಪ ಅಥವಾ ನಾಮಸ್ಮರಣೆ ಇರಬಾರದು. ಯಾವ ದೈವೀಕಲ್ಪನೆಗಳು ಅಗತ್ಯವಿಲ್ಲ. ಸಹಜವಾಗಿಯೇ ನಡೆಯುತ್ತಿರುವ ಉಸಿರಾಟವನ್ನು ಆಹ್ಲಾದದಿಂದ ಗಮನಿಸುತ್ತಿರಿ ಅಷ್ಟೆ. ಸಹಜವಾದ ಉಸಿರಾಟದ ಮೇಲೆಯೇ ಗಮನವಿಡುತ್ತಿದ್ದರೆ, ಕ್ರಮೇಣ ಆಲೋಚನಾ ರಹಿತ ಸ್ಥಿತಿ ಉಂಟಾಗುತ್ತದೆ. ಇದೇ ಧ್ಯಾನ ಸ್ಥಿತಿ. ಈ ಧ್ಯಾನ ಸ್ಥಿತಿಯಲ್ಲಿ ಅಪಾರವಾದ ವಿಶ್ವಮಯ ಪ್ರಾಣಶಕ್ತಿ (ಕಾಸ್ಮಿಕ್ ಎನರ್ಜಿ) ಶರೀರದಲ್ಲಿ ಪ್ರವೇಶಿಸಿ, ನಾಡಿಮಂಡಲ ಶುದ್ಧಿಯಾಗಿ ಅದ್ಭುತವಾದ ಆರೋಗ್ಯ ದೊರಕುತ್ತದೆ. ಪ್ರತಿದಿನ ನಿಯಮಬದ್ಧವಾಗಿ ಧ್ಯಾನ ಮಾಡುವುದರಿಂದ, ದೇಹದಲ್ಲಿ ವಿಶ್ವಪ್ರಾಣಶಕ್ತಿಯ ಮಟ್ಟ ಹೆಚ್ಚಿ ಸುಪ್ತಚೇತನಗಳು ಜಾಗೃತಿಯಾಗುತ್ತವೆ. ಕ್ರಮೇಣ ದಿವ್ಯಚಕ್ಷು ಉತ್ತೇಜನಗೊಳ್ಳುತ್ತದೆ. ಪಿರಮಿಡ್ ಶಕ್ತಿ ಲಭ್ಯವಿದ್ದೆಡೆ, ಪಿರಮಿಡ್‌ಗಳನ್ನು ಬಳಸಿ ಧ್ಯಾನ ಮಾಡಿ, ಧ್ಯಾನ ಸ್ಥಿತಿ ಬೇಗ ಬರುತ್ತದೆ; ಧ್ಯಾನ ಶಕ್ತಿ ಅಪಾರವಾಗಿ ಹೆಚ್ಚುತ್ತದೆ.



## ಧ್ಯಾನದ ಲಾಭಗಳು

★ ಸಂಪೂರ್ಣ ಆರೋಗ್ಯ
★ ನೆನಪಿನ ಶಕ್ತಿ ವೃದ್ಧಿ
★ ಮೂರನೇ ಕಣ್ಣು ಉತ್ತೇಜನ
★ ಆತ್ಮ ವಿಶ್ವಾಸ
★ ಬುದ್ಧಿ ಸೂಕ್ಷ್ಮತೆ
★ ಜೀವನದ ಗುರಿಯ ಸ್ಪಷ್ಟತೆ
★ ಆಧ್ಯಾತ್ಮಿಕ ಜ್ಞಾನ
★ ಏಕಾಗ್ರತೆಯ ಶಕ್ತಿ
★ ಮಾನಸಿಕ ಶಾಂತಿ





# ಏಕತಾ ಧ್ಯಾನ

"ಏಕತಾ ಧ್ಯಾನ" ಎಂಬುದು ಒಂದು "ಸಾಮೂಹಿಕ ಧ್ಯಾನ ಗೋಷ್ಠಿ". ನಾವು ಎಲ್ಲಿದ್ದರೆ ಅಲ್ಲೇ.
ಒಂದೇ ಸಮಯದಲ್ಲಿ ಎಲ್ಲರೂ ಕುಳಿತು ಮಾಡುವ ಧ್ಯಾನವು ಎಲ್ಲರನ್ನೂ ಒಗ್ಗೂಡಿಸುತ್ತದೆ.

## "ಪ್ರತಿ ಭಾನುವಾರ ಬೆಳಗ್ಗೆ 6 ಗಂಟೆಯಿಂದ 7 ಗಂಟೆಯವರೆಗೆ"

ಒಂದು ಗಂಟೆಯ ಸಮಯವನ್ನು ಈ ಶ್ರೇಷ್ಠ 'ಏಕತಾ ಸಂಪರ್ಕ'ಕ್ಕಾಗಿ ಆಯ್ಕೆ ಮಾಡಲಾಗಿದೆ.
ಇದು ಜೂನ್1, 2008 ರಿಂದ ಆರಂಭಗೊಂಡು ಡಿಸೆಂಬರ್ 2012ರ ಅಂತ್ಯಕ್ಕೆ ಕೊನೆಗೊಳ್ಳುತ್ತದೆ.

ಶ್ರೇಷ್ಠ ಏಕತಾ ಭಾವದೊಂದಿಗೆ "ಧ್ಯಾನ ಜಗತ್"ನ್ನು ಸಾಧಿಸೋಣ

## 2012ರ ಹೊತ್ತಿಗೆ ಇಡೀ ಜಗತ್ತನ್ನು ಆಧ್ಯಾತ್ಮೀಕರಿಸೋಣ !

"ಏಕತಾ ಧ್ಯಾನ ಯೋಜನೆ"ಯು ಇಡೀ ಜಗತ್ತಿನಾದ್ಯಂತ ವಿಸ್ತರಿಸಲೇಬೇಕು. ವಿಶ್ವಪ್ರಜ್ಞೆ ಮತ್ತು ಜಗತ್ತಿನ ಸಮನ್ವಯವನ್ನು
ಸಾಧ್ಯವಾದಷ್ಟು ಶೀಘ್ರವಾಗಿ ಜಗತ್ತಿನಾದ್ಯಂತ ಪಸರಿಸುವ ಘನ ಉದ್ದೇಶಕ್ಕಾಗಿ ನಾವೆಲ್ಲರೂ ಶ್ರಮಿಸೋಣ.
ಇಡೀ ಅಸ್ತಿತ್ವದ ಜೊತೆಯಲ್ಲಿ, ನೀವೂ ಸಹ ಇರುವಿರಿ ಎಂದು ನೀವು ಭಾವಿಸಿದರೆ,
ಈ ಏಕತಾ ಧ್ಯಾನದಲ್ಲಿ ನೀವೂ ಸಹ ಒಬ್ಬ ಅಭ್ಯರ್ಥಿಯೇ ಹೌದು !

*"ನಿಮ್ಮ ಉಸಿರಿನೊಂದಿಗೇ ಇರಿ"*

# ಎನ್‌ಲೈಟನ್ ಮೆಂಟ್... ಆತ್ಮಾನುಭವದೀಪ್ತಿ ... ನಿರ್ವಾಣ


ಫ್ರೆಡ್‌ರಿಕ್ ಲೆನ್ಜ್

''ಫ್ರೆಡರಿಕ್ ಲೆನ್ಜ್ ''... ನೇಪಾಳನಲ್ಲಿರುವ ಹಿಮಾಲಯ ಸಾಧುಗಳಲ್ಲಿ ನಿಜವಾದ ಆಧ್ಯಾತ್ಮಿಕ ಅನುಭವಗಳು, ಸಾಹಮಯವಾದ ಅನುಭೂತಿಗಳನ್ನು ಹೊಂದಿರುವ ಜಿಜ್ಞಾಸು! ಫ್ರೆಡರಿಕ್ ಲೆನ್ಜ್ ತನ್ನ ಮಾಸ್ಟರ್ ಆದ ''ಫ್ಯಾಪ್ ಕ್ಯಾಂ-ದುಪ್''ನ್ನು ಮುಂಚಿತವಾಗಿ ತನ್ನ ಕನಸಿನಲ್ಲೂ, ಮರುದಿನವೇ, ತಾನು ಅಡ್ಡಾಡುತ್ತಿರುವ ಸಮಯದಲ್ಲಿ ಹಿಮಾಲಯಗಳಲ್ಲಿ ಭೌತಿಕವಾಗಿಯೂ ಭೇಟಿ ಆಗಿದ್ದನು. ''ರೇ ಚಾರ್ಜ್-ಫ್ಯಾಜ್'' ಗುರುಕುಲದಲ್ಲಿರುವ ಕೊನೆಯ ಮಾಸ್ಟರ್ ಆದ''ಫ್ಯಾಪ್ ಕ್ಯಾಂ-ದುಪ್''ರವರ ಬೋಧನೆಗಳು ''ಸರ್ಫಿಂಗ್ ದಿ ಹಿಮಾಲಯಸ್ - ಎ ಸ್ಪಿರಿಚ್ಯುಯಲ್ ಅಡ್‌ವೆಂಚರ್'' ಎಂಬ ಪುಸ್ತಕದಲ್ಲಿ ತುಂಬಾ ಅದ್ಭುತವಾಗಿ ನೀಡಲಾಗಿದೆ. ಅದರಲ್ಲಿರುವ ಒಂದು ಆಣಿಮುತ್ತನ್ನು ಈ ಸಂಚಿಕೆಯಲ್ಲಿ ನೋಡೋಣ.

-ಸಂಪಾದಕ

''ಎನ್‌ಲೈಟನ್‌ಮೆಂಟ್'' ಎಂಬುವುದು ವಾಸ್ತವವಾಗಿರುವುದನ್ನು ಯಾವುದನ್ನೂ ಸಹ ಬದಲಾಯಿಸುತ್ತಿಲ್ಲ... ಆದರೂ, ಎಲ್ಲದರಲ್ಲೂ ಪರಿಣಾಮವನ್ನು ತೋರಿಸುತ್ತದೆ! ಅಂದರೆ, ಎನ್‌ಲೈಟನ್‌ಮೆಂಟ್ ಎನ್ನುವುದು ನಿಜವಾಗಲೂ ಯಾವುದರಲ್ಲೂ ಬದಲಾವಣೆಯು ಆಗದೆ, ನಮ್ಮಲ್ಲಿರುವುದನ್ನು ಮಾತ್ರವೇ ನಮ್ಮ ಅನುಭವಕ್ಕೆ ತರುತ್ತದೆ ಎಂದು ಹೇಳಬಹುದು. ತುಂಬಾ ಜನರು ಸಾಧಾರಣವಾಗಿ ಎನ್‌ಲೈಟನ್ ಆದ ನಂತರ, ಅವರ ಜೀವನಗಳಲ್ಲಿ ಏನೋ ಅನೂಹ್ಯವಾದ ಅದ್ಭುತಗಳು ನಡೆಯುತ್ತವೆಂದು ಊಹಿಸುತ್ತಾ ಇರುತ್ತಾರೆ. ಎನ್‌ಲೈಟನ್ ಆಗಿರುವವರು ಅವರವರ ಇತರ ದೈನಂದಿನ ಕಾರ್ಯ ಕಲಾಪಗಳನ್ನು ಕಟ್ಟಿಟ್ಟು, ಆಕಸ್ಮಿಕವಾಗಿ ಒಂದು ಪ್ರತ್ಯೇಕವಾದ (ಕಾಷಾಯ) ವಸ್ತ್ರಗಳನ್ನು ಧರಿಸಿ, ಜನಗಳಿಂದ ದೂರವಾಗಿ ಹೊರಟು, ಪರ್ವತ ಸಾಲುಗಳಲ್ಲಿ ಕುಳಿತುಕೊಂಡು, ದಿನವೆಲ್ಲಾ ಧ್ಯಾನ ಮಗ್ನರಾಗಿರುತ್ತಾರೆಂದು ಭಾವಿಸುತ್ತಾ ಇರುತ್ತಾರೆ.

★ ★ ★

ಆದರೆ, ಒಂದು ಜೆನ್ ಸನ್ಯಾಸಿಗೆ ತನ್ನ ದೈನಂದಿನ ಕಾರ್ಯಕ್ರಮಗಳಾಗಿರುವ ''ಸೌದೆಯನ್ನು ಹೊಡೆಯುವುದು ನೀರು ಹೊರುವುದು'' ಇಂಥದೇ ಕೆಲಸಗಳು ವಿಸ್ತಾರವಾಗಿಯೂ, ನಿರಾಸಕ್ತವಾಗಿಯೂ ಅನ್ನಿಸುತ್ತಿತ್ತು. ಆದರೆ, ಆತ ಎನ್‌ಲೈಟನ್ ಆದ ನಂತರ, ಸೌದೆ ಹೊಡೆಯುವುದು ನೀರು ಹೊರುವುದು, ಮಾತ್ರವೇ ಅಲ್ಲದೆ, ಜೀವನದಲ್ಲಿ ಉಳಿದ ಅಂಶಗಳೆಲ್ಲದರ ಮೇಲೆ ತನ್ನ ತುಂಬಾ ಒಳ್ಳೆಯ ಬದಲಾವಣೆ ಬರುವುದನ್ನು ಗಮನಿಸಿದ. ಸೌದೆಯನ್ನು ಹೊಡೆಯುವುದರಲ್ಲು, ನೀರು ಹೊರುವುದರಲ್ಲೂ ಸಹ, ಎತ್ತರದಲ್ಲಿರುವ ಏಕಾಂತ ಪ್ರದೇಶಗಳಲ್ಲಿ, ಧ್ಯಾನದಲ್ಲಿ ದರ್ಶಿಸಿದ, ನಿರ್ವಾಣ ಸ್ಥಿತಿಯನ್ನೇ ಗಮನಿಸಲು ಪ್ರಾರಂಭಿಸಿದ.

★ ★ ★

ನಾವು ಎನ್‌ಲೈಟನ್ ಆಗುವ ಮುನ್ನ, ಈ ಪ್ರಪಂಚ ಕೇವಲ ತ್ರಿಕೋಣ ವಾಸ್ತವವಾಗಿಯೂ, ನಿರ್ವೇದವಾಗಿಯೂ, ದುಃಖಭರಿತವಾಗಿಯೂ, ನಿಸ್ತೇಜಿತವಾಗಿಯೂ ಕಾಣಿಸುತ್ತದೆ. ಆದರೆ, ವಾಸ್ತವವಾಗಿ ಹೇಳಬೇಕಾದರೆ, ಇದು ಕೇವಲ ಮೂರು ಪರಿಮಿತಿಗಳು ಇರುವ ಪ್ರಪಂಚವಲ್ಲವೇ ಅಲ್ಲ. ನಾವು ಎಚ್ಚರಿಕೆಯಿಂದ ಗಮನಿಸಬಲ್ಲೆವಾದರೆ, ಈ ಪ್ರಪಂಚವು ನಿರುತ್ಸಾಹಕ್ಕೆ ಅವಕಾಶವೇ ಇಲ್ಲದಷ್ಟು ವಿಭಿನ್ನವಾಗಿ, ವಿಚಿತ್ರವಾಗಿ ಇದೆ ಎಂಬುದನ್ನು ಕಂಡುಕೊಳ್ಳಬಹುದು.

★ ★ ★

ಜೀವನ ಕೆಲವು ಲಕ್ಷಾಂತರ ದೃಷ್ಟಿಕೋನಗಳಿಂದ ಸಂಮೃದ್ಧವಾಗಿದೆ. ಎಚ್ಚರಿಕೆಯಿಂದಿರುವ ಚೇತನದಾಯಕ ಬುದ್ಧಿಗೆ ಜೀವನವು ಬಗೆ ಬಗೆಯ ವೈವಿಧ್ಯ ಮಯವಾದ ಗುರಿಗಳಿಂದ, ಆಗ್ಗಿಂದಾಗ್ಗೆ ಸಾಹಸಮಯವಾಗಿ ಆಸಕ್ತಿಕರವಾಗಿ ... ನಿರ್ವೇದಕ್ಕೆ ಸಮಯ ಸಹ ಸಿಕ್ಕದಿರುವಂತೆ ಸುಂದರವಾಗಿ, ಅನಂತವಾಗಿ, ಎಷ್ಟೋ ತರದ ಅಂಶಗಳಿಂದ ನಿರಂತರವಾಗಿ ಸಾಗಿ ಹೋಗುತ್ತಿರುವಂತೆ ಕಾಣುತ್ತದೆ.

★ ★ ★

ಒಂದು ಬಾರಿ ನಾವು ಎನ್‌ಲೈಟನ್ ಆದ ಮೇಲೆ, ಪ್ರತ್ಯೇಕವಾಗಿ ಒಂದು ಆಧ್ಯಾತ್ಮಿಕ ಆಶ್ರಮದಲ್ಲಿರಬೇಕಾದ ಅವಶ್ಯಕತೆ ಇರುವುದಿಲ್ಲ. ಪ್ರಪಂಚವೆಲ್ಲಾ ನಮಗೊಂದು ಅದ್ಭುತವಾದ 'ಋಷ್ಯಾಶ್ರಮ'ವಾಗಿ ಕಾಣಿಸುತ್ತದೆ. ನಮಗೆ ಆಸಕ್ತಿಕರವಾದ ಅತ್ಯಂತ ಸಾಧಾರಣವಾದ ಜೀವನವನ್ನು ಆರಿಸಿಕೊಂಡು, ಅದ್ಭುತವಾಗಿ ಜೀವಿಸಬಲ್ಲವರಾಗುತ್ತೇವೆ!

★ ★ ★

"ಈ ಭೌತಿಕ ಪ್ರಪಂಚದಲ್ಲಾಗಲಿ, ವಿವಿಧ ಸೂಕ್ಷ್ಮ ಪ್ರಪಂಚದಲ್ಲಾಗಲೀ ಪ್ರತಿಯೊಂದು ಸಹ, ಒಂದು ಪರಿಮಿತ ಸಮಯದ ತನಕ ಮಾತ್ರವೇ ತನ್ನ ಇರುವಿಕೆಯನ್ನು ಹೊಂದಿರುತ್ತದೆ" ಎಂದು, "ಕೇವಲ ನಮ್ಮ ಅಂತರಂಗದಲ್ಲಿ ಆವಿಷ್ಕರಿಸಲ್ಪಟ್ಟ ನಿರ್ವಾಣ ಸ್ಥಿತಿ ಮಾತ್ರವೇ ಶಾಶ್ವತವಾಗಿ ಉಳಿದಿರುತ್ತದೆ"ಎಂದು... ಎನ್‌ಲೈಟನ್ ಆಗಿರುವ ಬುದ್ಧರಿಗೆ ಚೆನ್ನಾಗಿ ತಿಳಿದಿದೆ. ಹೌದು... ನಿರ್ವಾಣ ಸ್ಥಿತಿ

ಮಾತ್ರವೇ ನಿರಂತರವಾಗಿ ಸ್ಥಿರವಾಗಿರುತ್ತದೆ. ಆದಕ್ಕೆ, ನಿರ್ವಾಣ, ಅಥವಾ "ಎನ್‌ಲೈಟನ್‌ಮೆಂಟ್" ಎಂಬುವುದು, ಯಾವುದೇ ಭೌತಿಕ ಲೋಕಕ್ಕಿಂತ ಕೂಡ, ಯಾವುದೇ ಸೂಕ್ಷ್ಮಲೋಕಕ್ಕಿಂತ ಸಹ ಹೆಚ್ಚು ವಾಸ್ತವಿಕತೆಯನ್ನು ಹೊಂದಿರುತ್ತದೆ.

★ ★ ★

"ನಿರ್ವಾಣಸ್ಥಿತಿ" ಬೇರೆಯಾಗಿ ಇರುವುದಿಲ್ಲಾ "ಬದಲಾವಣೆ ಆಗುವುದೇ," ನಿಜಕ್ಕೂ ಪ್ರತಿಯೊಂದು ಕ್ಷಣಕ್ಷಣಕ್ಕೂ ಕ್ರಮವಾಗಿ ಬದಲಾವಣೆ ಆಗುತ್ತಲೇ ಇರುತ್ತದೆ. ಆದರೆ, ಕೆಲವು ಅಂಶಗಳು... ಕೆಲವು ಸಂದರ್ಭಗಳಲ್ಲಿ ಸ್ಥಿರವಾಗಿ ಇದ್ದ ಹಾಗೆ ನಮಗೆ ಅನಿಸುತ್ತಿರುತ್ತದೆ. ಆದರೆ, ಅದೆಲ್ಲಾ ನಮ್ಮ ಸ್ಥಿರವಾಗಿರುವ ಅಭಿಪ್ರಾಯಗಳು, ''ಬಲವಾಗಿರುವ ನಂಬಿಕೆಗಳು'' ನಮಗೆ ಆಗುತ್ತಿರುವ ಭ್ರಮೆ ಮಾತ್ರವೇ ಅಲ್ಲವೆ!

★ ★ ★

ಎಲ್ಲಾ ವಸ್ತುಗಳು, ಎಲ್ಲಾ ದೇವರು ಸಹ ಕಂಪನ ಶಕ್ತಿ ತರಂಗಳಿಂದ ರೂಪುಗೊಂಡಿದೆ. ನಿಜಕ್ಕೂ, ನಮಗೆ ಕಾಣಿಸುತ್ತಿರುವ ಹಾಗೆ ಪ್ರಪಂಚದಲ್ಲಿ ಯಾವ ವಸ್ತುವು ಸಹ ಸ್ಥೂಲವಾಗಿಯೂ, ಘನವಾಗಿಯೂ ಇಲ್ಲ. ನಮ್ಮ ಹೆಚ್ಚು ಸ್ಥಾಯಿ ಶಕ್ತಿ, ಸಮಾನಾಂತರ ಹೆಚ್ಚು ಸ್ಥಾಯಿ ಶಕ್ತಿಯನ್ನು ವಸ್ತುಗಳೆಲ್ಲಾ ನಮಗೆ ತಾತ್ಕಾಲಿಕವಾಗಿ ಘನವಾಗಿ ಇದ್ದ ಹಾಗೆ ಕಾಣಿಸುತ್ತೆ ಅಷ್ಟೆ.

★ ★ ★

ಈ ವಿಶ್ವವೆಲ್ಲಾ ಅನಂತ ಕೋಟಿ ಲೋಕಗಳಿಂದ ತುಂಬಿದೆ. ಕೆಲವು ಲೋಕಗಳು, ಉಳಿದ ಲೋಕಗಳಿಗಿಂತ ಹೆಚ್ಚು ಕಾಲ ಸ್ಥಿರವಾಗಿ ಇರುತ್ತವೆ. ಅಷ್ಟೆ, ಹೊರತು, ನಿರ್ವಾಣ ಸ್ಥಿತಿ ಮಾತ್ರವೇ ಬದಲಾವಣೆಗೆ ಅತೀತವಾಗಿರುತ್ತದೆ. ಆದ್ದರಿಂದ, ಯಾವುದೇ ಲೋಕದಲ್ಲಿರುವ ಒಬ್ಬ ಜೀವಿಯು ನಿರ್ವಾಣ ಸ್ಥಿತಿಗೆ ಎಷ್ಟು ಹತ್ತಿರವಾಗಿದ್ದರೆ, ಅಷ್ಟು ಹೆಚ್ಚು ವಾಸ್ತವಿಕವಾಗಿ ಜೀವಿಸುತ್ತಿದ್ದಾನೆಂದು ಅರ್ಥ. ಹಾಗೆಯೇ, ನಿರ್ವಾಣ ಸ್ಥಿತಿಗೆ ಎಷ್ಟು ದೂರವಾಗಿದ್ದರೆ, ಅಷ್ಟು ಹೆಚ್ಚು ಅವಾಸ್ತವಿಕವಾಗಿ ಜೀವಿಸುತ್ತಾ ಇರುತ್ತಾರೆ.

★ ★ ★

"ಮನಸ್ಸಿನ ಪ್ರಾಪಂಚಿಕ ಮೇದಸ್ಸಿ"ಗೆ ಅತೀತವಾಗಿ ಬೆಳಗುತ್ತಿರುವ ಪರಿಪೂರ್ಣ ಜ್ಞಾನದೀಪವೇ "ನಿರ್ವಾಣ."

ನಾವು ಎಚ್ಚರಿಕೆಯಿಂದ ಇರುವುದನ್ನು ಸಾಧನೆ ಮಾಡಿದರೆ, ನಮ್ಮನ್ನು ಭ್ರಮೆಯಲ್ಲಿ ಮುಳುಗಿಸಿ, ಅವಾಸ್ತವಿಕ ಮಾನಸಿಕ ಸ್ಥಿತಿಗಳಲ್ಲಿ ಇರಿಸುವ ಪರಿಮಿತ ಸಿದ್ಧಾಂತಗಳೆಲ್ಲವನ್ನು ಮೀರಬಲ್ಲ ಹಂತಕ್ಕೆ ನಾವು ಬೆಳೆಯುತ್ತೇವೆ! ಸಾಮಾನ್ಯವಾಗಿ ತುಂಬಾ ಜನ ಅನುಭವಿಸುವ, ಪರಿಮಿತ ಮಾನಸಿಕ ಸ್ಥಿತಿಗಳಿಗೆ ಅತೀತವಾಗಿ ಅದಕ್ಕೆ ಮೇಲಿನ ಹಂತದಲ್ಲಿ ಮತ್ತೆಷ್ಟೋ ಬೆಲೆಬಾಳುವ ಅವಗಾಹನಸ್ಥಿತಿಗಳಿವೆ.

ಈ ತರಹದ "ಹೆಚ್ಚಿನ ವಾಸ್ತವಿಕತೆ" ಇರುವ ಸ್ಥಿತಿಗಳನ್ನು ಹೊಂದಲ್ಪಟ್ಟಾಗ, ನಾವು ಎಷ್ಟೋ ಪಟ್ಟು ಹೆಚ್ಚು ಆನಂದವನ್ನು ಅನುಭವಿಸುತ್ತೇವೆ! ಅದಕ್ಕೆ, ಪ್ರಾಚೀನ ಅಟ್ಲಾಂಟೀಯನ್ ಸಂಸ್ಕೃತಿಗೆ ಸೇರಿದ ಜಗದ್ಗುರುಗಳು ಧ್ಯಾನವನ್ನು ಅಭ್ಯಸಿಸಿ, ಧ್ಯಾನದಿಂದ ವಿಶ್ವದಲ್ಲಿ ರಹಸ್ಯವಾಗಿರುವ ವಿವಿಧ ಸ್ಥಾಯಿಗಳಲ್ಲಿರುವ ವಾಸ್ತವಗಳನ್ನು ಆವಿಷ್ಕರಿಸಿದರು.

"ಎನ್‌ಲೈಟನ್" ಆಗಬೇಕಾದರೆ, ನಮ್ಮ ಅನಾವಶ್ಯಕವಾದ ಆಲೋಚನೆಗಳನ್ನು, ಉದ್ರೇಕವನ್ನು ನಿಯಂತ್ರಿಸಿ, ಮನಸ್ಸನ್ನು ಶೂನ್ಯ ಮಾಡಿಕೊಳ್ಳುವುದು ತುಂಬಾ ಅತ್ಯವಶ್ಯಕ. ಅದೇ ಧ್ಯಾನಕ್ಕೆ ಮೊದಲನೆಯ ಅಂಶ. ನಮ್ಮ ಭ್ರಮೆಗಳಿಂದ..... ವ್ಯತಿರೇಕ ಭಾವನೆಗಳಿಂದ ನಿರಾಶಾದಾಯಕವಾದ ಧೋರಣೆಯಿಂದ ... ಹೊರಗೆ ಬಂದು ಸ್ಪೃಹೆಯಿಂದ, ಪ್ರಜ್ಞೆಯಿಂದ, ವಿವಿಧ ಲೋಕಗಳಲ್ಲಿರುವ ಉನ್ನತ ಕಾಂತಿಮಯ ಸ್ಥಿತಿಗಳಲ್ಲಿ ನಮ್ಮ ಮನಸ್ಸನ್ನು ವಿಹರಿಸಬೇಕಾದರೆ ಧ್ಯಾನ ಎಂಬುವುದು ಅತ್ಯವಶ್ಯಕ.

★ ★ ★

'ಎನ್‌ಲೈಟನ್‌ಮೆಂಟ್' ಎಂದರೆ ಚಿತ್ತವೃತ್ತಿ, ಭ್ರಮೆಗಳಿಗೆ ಒಳಗಾಗದೇ ಇರುವ ಒಂದು ಪರಿಪೂರ್ಣವಾದ ಪ್ರಜ್ಞೆ. ಜೀವನದಲ್ಲಿರುವ ನಿಜವಾದ ಸಂತೃಪ್ತಿ ಸುಂದರವಾಗಿ ಕಾಣಿಸಿರುವುದು ಆನಂದವನ್ನು ನೀಡಿರುವ...ಇನ್ನೂ ನೀವು ಅನುಭವಿಸುವ ಕ್ಷಣಗಳು ಏನಾದರೂ ಇದೆ ಅಂದರೆ, ಅವು ಕೇವಲ 'ಎನ್‌ಲೈಟನ್‌ಮೆಂಟ್' ನೀಡಿರುವ ವರಗಳು ಮಾತ್ರವೇ ಅಲ್ಲವೆ!

"ಎನ್‌ಲೈಟನ್‌ಮೆಂಟ್" ಎಂದರೆ ಒಂದು 'ಪರಿಪೂರ್ಣವಾದ ಮಾನಸಿಕಸ್ಥಿತಿ'. ಆ ಸ್ಥಿತಿಯಲ್ಲಿ ಮಾತ್ರವೇ ಮೇಲೆ ಉದಾಹರಿಸಿದ ಅಪರೂಪವಾದ ಅನುಭವಗಳು ಸಾಧ್ಯವಾಗುತ್ತವೆ. "ಎನ್‌ಲೈಟನ್‌ಮೆಂಟ್" ಎಂದರೆ ವಾಸ್ತವವನ್ನು ಸುಸ್ಪಷ್ಟವಾಗಿ ತೋರಿಸುವ "ಆತ್ಮಜ್ಞಾನ ದೃಷ್ಟಿ".

★ ★ ★

ಬಹಳ ಜನ ಸಾಧಾರಣವಾಗಿ "ಪ್ರಪಂಚ" ಎಂದು ಭಾವಿಸುತ್ತಿರುವುದೆಲ್ಲಾ ಕೇವಲ ಒಂದು "ಸ್ವಪ್ನ". ಹೇಗೆ ನಾವು ಕನಸು ಕಾಣುತ್ತಿರುವಾಗ ಅಲ್ಲಿರುವುದೆಲ್ಲಾ ವಾಸ್ತವವಾಗಿ ಕಾಣಿಸುತ್ತದೋ... ಹಾಗೆಯೇ, ನಾವು ಅದನ್ನು ಹಾಗೆಯೇ ಸ್ವೀಕರಿಸಿ ಅನುಭವಿಸುತ್ತಿರುವ ತನಕ, ಈ ಸಾಧಾರಣ ಜೀವನ ಸಹ ವಾಸ್ತವವಾಗಿ ಇರುವ ಹಾಗೆ

ಕಾಣಿಸುತ್ತದೆ.

ಆದರೆ, ಒಂದು ಭಾವನೆಯಾಗಲಿ ಒಂದು ಅನುಭವವಾಗಲೀ ನಮ್ಮನ್ನು ಬಿಟ್ಟು ಹೋಗುವ ಸಮಯ ಬಂದಾಗ, ಅದರ ಸಾಂದ್ರತೆ, ವಾಸ್ತವಿಕತೆ ಸಹ... ಎಚ್ಚರಗೊಳ್ಳುತ್ತಲೇ, ಆವಿಯಾಗುವ "ಕನಸು"ಗಳ ಹಾಗೇ.... ಮಾಯವಾಗುತ್ತದೆ.

ತಿಳಿದಿರುವ ಯಥಾರ್ಥಕ್ಕೆ ಅತೀತವಾಗಿರುವ ಅದ್ಭುತ ಸ್ಥಿತಿ "ನಿರ್ವಾಣ". ಆ ನಿರ್ವಾಣ ಸ್ಥಿತಿಯೋ ತನಗೆ ಬೇರೆಯಾಗಿಯೇ ಇರುವ ಅನೇಕ ಮಧ್ಯಂತರ ಲೋಕಗಳನ್ನು ವಿವಿಧ ಜೀವಿಗಳನ್ನು ಸೃಷ್ಟಿಸುತ್ತದೆ. ಆ ಶಾಶ್ವತ ನಿರ್ವಾಣವೇ ಎಲ್ಲವನ್ನೂ ಪೋಷಿಸುತ್ತದೆ. ಎಲ್ಲವನ್ನು ಪರಿಣಾಮ ಹೊಂದಿಸುತ್ತದೆ. ಎಲ್ಲವನ್ನೂ ತುಂಬಾ ಚಾಕಚಕ್ಯತೆಯಿಂದ ಪರಿಣತಿ ಹೊಂದಿ, ಕೊನೆಗೆ ಎಲ್ಲವನ್ನು ತನ್ನಲ್ಲಿಯೇ ಸಾದರವಾಗಿ ಆಹ್ವಾನಿಸುತ್ತದೆ.

★ ★ ★

ನಾವು ವಾತಾವರಣವನ್ನು ನಿಯಂತ್ರಿಸಲಾಗುವುದಿಲ್ಲ. ಮಹಾ ಅಂದರೆ, ಸುಮಾರು ಸ್ವಲ್ಪ ಮುಂಚಿತವಾಗಿ ಊಹಿಸಬಲ್ಲವು! ಅದೇ ತರಹ ಜೀವನವನ್ನು ನಿಯಂತ್ರಿಸುವುದು ತುಂಬಾ ಕಷ್ಟ. ಕಾರ್ಯಕಾರಣಗಳನ್ನು ಲೆಕ್ಕಿಸಿ, ಸ್ವಲ್ಪ ಊಹಿಸಬಹುದು ಅಷ್ಟೆ! ಆದರೆ, ನಾವು ಒಂದು ಗಾಢ ಧ್ಯಾನಸ್ಥಿತಿಯಲ್ಲಿ ನಮ್ಮ ಬುದ್ಧಿಯನ್ನು ನಿರ್ವಾಣ ಸ್ಥಿತಿಯಲ್ಲಿ ಇರಿಸಿದ ನಂತರ, ನಾವು ಎಚ್ಚರಿಕೆಯಿಂದ ಕೂಡಿದ ಚೈತನ್ಯ ಸ್ಥಿತಿಯಲ್ಲಿ ಸ್ಥಿರವಾಗಿ ಇರುತ್ತೇವೆ. ಆಗ... ಜೀವನಕ್ಕೆ ಸಂಬಂಧಿಸಿದ ಕಾರ್ಮೋಡಗಳು (ಕಷ್ಟಸುಖಗಳು) ಬರುತ್ತಾ ಹೋಗುತ್ತಾ ಇರುತ್ತದೆ. ದುಃಖಭರಿತವಾದ ಸಮಯಗಳು ಮಳೆಯಂತೆ ಸುರಿಯುತ್ತದೆ. ಅವು ಹೇಗೋ ಪ್ರಕೃತಿಯಲ್ಲಿ ಸಹಜವಾಗಿ ನಡೆಯುತ್ತಾ ಇರುವುದೋ, ಎನ್‌ಲೈಟನ್‌ಮೆಂಟ್ ಆಗಿರುವ ಮಾಸ್ಟರ್‌ಗಳ ಜೀವನದಲ್ಲೂ ಸಹ ಇದು ಸಹಜವೆ! ಇಲ್ಲದಿದ್ದರೆ, ಧ್ಯಾನದಿಂದ, ಸಾಧನೆಯಿಂದ ನಮ್ಮ ಮೈಂಡ್ ನಿರ್ವಾಣದಲ್ಲಿ ಸ್ಥಿರವಾದ ನಂತರ, ನಾವು ಎಲ್ಲಾ ಕಾಲಗಳಲ್ಲೂ ಎಲ್ಲಾ ಸಮಯದಲ್ಲೂ ನಿಶ್ಚಲಾನಂದದಿಂದ ಇದ್ದುಬಿಡುತ್ತೇವೆ.

★ ★ ★

ಸಾಧಾರಣವಾಗಿ ಎನ್‌ಲೈಟನ್ ಆಗಲು ತುಂಬಾ ಸಮಯ ಹಿಡಿಸುತ್ತದೆ. ಆದರೆ, ಇದು ಯಾವ ಇತರ ಕಲೆಗಳನ್ನು ಅಭ್ಯಸಿಸುವುದಕ್ಕಿಂತ ಬೇರೇನೂ ಅಲ್ಲ. ನಮಗೆ ಬೇಕಾಗಿರುವುದೆಲ್ಲಾ ಒಳ್ಳೆ ಗುರು. ಶ್ರದ್ಧೆಯಿಂದ ಕೂಡಿರುವ ಸಾಧನೆ ಅಷ್ಟೆ. ನಾವು ಬೇರೆ ಭಾಷೆಗಳನ್ನು ಕಲಿತುಕೊಳ್ಳಲು ಪ್ರಾರಂಭಿಸಿದ ಮೊದಲನೇ ದಿನವೇ ಅದನ್ನು ಮಾತನಾಡಲಾಗುವುದಿಲ್ಲ ಅಲ್ಲವೆ! ಹಾಗೆಯೇ ... ನಾವು ಧ್ಯಾನ ಸಾಧನೆ ಪ್ರಾರಂಭಿಸಿದ ತಕ್ಷಣ ತುಂಬಾ ಹೆಚ್ಚು ಫಲಿತಗಳನ್ನು ನಿರೀಕ್ಷಿಸಕೂಡದು.

★ ★ ★

ಆದರೆ, ಕೆಲವು ವಾರಗಳು ಧ್ಯಾನ ಮಾಡಿದ ನಂತರ, ನಾವು ಸ್ವಲ್ಪ ಶಕ್ತಿವಂತರಾಗಿ ಸ್ವಲ್ಪ ಆನಂದವನ್ನು ಹೊಂದುತ್ತೇವೆ. ಆದರೆ, ನಮ್ಮ ಧ್ಯಾನ ಸಾಧನೆ ಹೆಚ್ಚಾದ ಹಾಗೆ ಕ್ರಮವಾಗಿ ಪುಷ್ಕಳವಾದ ಅಂತರಂಗಿಕ ಶಕ್ತಿ ನಮಗೆ ಸಿಕ್ಕಿ ಅಪಾರವಾದ ಆನಂದವನ್ನು ಹೊಂದುತ್ತೇವೆ. ಇನ್ನು, ಆ ನಂತರ, ಇನ್ನೂ ನಮ್ಮ ಸಾಧನೆಯನ್ನು ವೃದ್ಧಿಸಿದರೆ, ಆ ಆನಂದಪಾರವಶ್ಯತೆಯ ಅನುಭವವಾಗುತ್ತದೆ. ಪದಗಳಿಗೆ ಸಿಗದ ಶಕ್ತಿಯುತವಾದ ಜ್ಞಾನ ಸ್ವಂತವಾಗುತ್ತದೆ.

★ ★ ★

ನಾವು ಧ್ಯಾನ ಮಾಡಿದ ಪ್ರತಿಸಾರಿ, ಅಂತರಂಗ ಶಾಂತಿ, ಪ್ರಪಂಚದ ಜೊತೆಯೂ, ನಮ್ಮಲ್ಲಿಯೇ ಇದ್ದ ಶಾಶ್ವತಾನಂದದ ಜೊತೆಯೂ ಒಂದು ಬಲವಾದ ಬಂಧವನ್ನು ಹೆಚ್ಚಿಸಿಕೊಳ್ಳುತ್ತಾ ಇರುತ್ತೇವೆ. ಬಹಳ ವರ್ಷಗಳ ಸುದೀರ್ಘ ಸಾಧನೆಯ ನಂತರ, ಆ ಬಂಧ ನಮಗೆ ಮತ್ತಷ್ಟು ಪ್ರಕಾಶವನ್ನು, ಮತ್ತಷ್ಟು ತಾದಾತ್ಮ್ಯತೆಯನ್ನು ನೀಡುತ್ತದೆ. ಆದರೆ, ಧ್ಯಾನ ಪ್ರಾರಂಭಿಸಿದ ಕ್ಷಣದಿಂದಲೇ ನಮಗೆ ಈ ಪ್ರಕಾಶವನ್ನು, ತಾದಾತ್ಮ್ಯತೆಯನ್ನು ಧ್ಯಾನ ಸ್ಥಿತಿಯಲ್ಲಿ ಸ್ಪಷ್ಟವಾಗಿ ಗಮನಿಸಬಹುದು. ಅದು ನಮ್ಮ ದೈನಂದಿನ ಜೀವನವನ್ನು ಪ್ರಭಾವಿತಗೊಳಿಸುವುದನ್ನು ಸಹ ನೋಡಬಹುದು!

ಪ್ರತಿ ತಿಂಗಳು ನಮ್ಮ ಸಾಧನೆಯಲ್ಲಿ ಪಟ್ಟು ಹಿಡಿದು ಸಾಧಿಸುತ್ತಾ ಹೋದ ಹಾಗೆ ಸ್ವಲ್ಪ ಸ್ವಲ್ಪವಾಗಿ, ಮತ್ತಷ್ಟು ಕಾಂತಿಪರವಶವಾಗಿ ... ನಿಜ ಜೀವನದಲ್ಲಿ ಇನ್ನೂ ಹೆಚ್ಚು ಸಮಯಗಳಲ್ಲಿ ಸ್ಪರ್ಶಿಸುತ್ತಾ ಇರುತ್ತದೆ.

★ ★ ★

ಒಬ್ಬ ಎನ್‌ಲೈನ್‌ಟನ್ ಬೌದ್ಧ ಗುರುವು, ತನ್ನ ಶಿಷ್ಯರ ಕಾಂತಿ ಶರೀರಗಳಿಗೆ ಪ್ರಕಾಶವನ್ನು ಪ್ರಸಾದಿಸುತ್ತಾನೆ. ಆತ ನೇರವಾಗಿ ಕಾಂತಿಯನ್ನು , ಶಕ್ತಿಯನ್ನು, ಜ್ಞಾನವನ್ನು, ಅವರ 'ಆರ'ದಲ್ಲಿ ಪ್ರಸಾರ ಮಾಡುತ್ತಾನೆ. ಆತ ನೀಡಿರುವ ಪ್ರಸಾದ, ಶಿಷ್ಯರಲ್ಲಿ ಅತಿಶಯವಾದ ಪ್ರಾಣಶಕ್ತಿಯನ್ನು ತುಂಬುತ್ತದೆ. ಹಾಗೆ ವೃದ್ಧಿಯಾದ ಪ್ರಾಣಶಕ್ತಿ ಅವರು ಇನ್ನೂ ಆಳವಾಗಿ ಧ್ಯಾನಿಸಲು, ಇನ್ನೂ...ಅವರ ಜೀವನದಲ್ಲಿ ವಿವಿಧ ಅಂಶಗಳನ್ನು ತ್ವರಿತ ಗತಿಯಿಂದ ಅನುಭವದಲ್ಲಿ ದರ್ಶಿಸಿ ಅನಾಯಾಸವಾಗಿ ಇನ್ನೂ ಹೆಚ್ಚು ಆನಂದವನ್ನು ಪಡೆಯಲು ಸಹಕರಿಸುತ್ತದೆ.

★ ★ ★

'' ನಿರ್ವಾಣ''...'' ಎನ್‌ಲೈಟನ್‌ಮೆಂಟ್'' ಈ ಎರಡೂ ಪರ್ಯಾಯ ಪದಗಳು. ಯಾವ ಹೆಸರಿನಲ್ಲಿ ಕರೆದರೂ ... ''ಸ್ಪಷ್ಟವಾದ

ಶಾಶ್ವತೆ, ಶಾಂತಿ, ಆನಂದಗಳೇ'', ಆ ಸ್ಥಿತಿಯ ಸಹಜ ಪ್ರಕೃತಿಯಾಗಿ ಇರುತ್ತವೆ. ನಮ್ಮ ಜೀವನದಲ್ಲಿ ಪರಿಣಾಮ ಹೊಂದುವ ಉಳಿದ ದಿನಗಳ ಅನುಭವಗಳ ಹಾಗೆ ಅಲ್ಲದೆ... ನಿರ್ವಾಣ ಸ್ಥಿತಿ ಮಾತ್ರ ಸದಾ ನಮ್ಮ ಜೊತೆ ಸ್ಥಿರವಾಗಿರುತ್ತದೆ.

★ ★ ★

ಆ 'ಶಾಂತಿ', ಆ 'ಲೈಟ್'ನ ವಾಸ್ತವವನ್ನು ನಮ್ಮ ಧ್ಯಾನ ಸ್ಥಿತಿಯಲ್ಲಿ ಸ್ವಯಂ ಆಗಿ ನಾವೇ ದರ್ಶಿಸಬೇಕು. ಆಗ ಮಾತ್ರವೇ ನಿಜಕ್ಕೂ ಜೀವನ ಎಷ್ಟು ಪರಿಪೂರ್ಣವಾಗಿದೆಯೋ ತಿಳಿಯುತ್ತದೆ. ಆ ನಂತರ, ನಮ್ಮ ಜೊತೆ ಆನಂದ ಸದಾ ಇರುತ್ತದೆ.

'ಎನ್‌ಲೈಟನ್' ಆಗಿರುವವರ ಆನಂದವು ಪ್ರಾಪಂಚಿಕ ಅನುಭವಗಳ ಮೇಲೆ ಆಧಾರವಾಗುವುದಿಲ್ಲ...ಆದ್ದರಿಂದ, ಅವರು ಮಾತ್ರವೇ ಸ್ಥಿರವಾದ ಆನಂದದಲ್ಲಿರುತ್ತಾರೆ. ನಿರ್ವಾಣ ಸ್ಥಿತಿಯ ಜೊತೆ ಅನುಸಂಧಾನ ಆಗಿರುವುದರಿಂದ, ಅನಂತವಾಗಿ ಉನ್ನತವಾಗುತ್ತಿರುವ ಅಂತರಂಗಿಕ ಶಕ್ತಿಯ ಮೇಲೆ ಮಾತ್ರವೇ, ಅವರ ಆನಂದ ಆಧಾರವಾಗಿರುತ್ತದೆ.

— ಕನ್ನಡಕ್ಕೆ : ಪುಷ್ಪಾಮೋಹನ್ ಮತ್ತು ರೇಣುಕಾ ರಾಮಯ್ಯ.

## ತಾಂಡವ ಶಿವ ಸಂಗೀತ ನೃತ್ಯ ಧ್ಯಾನ ಮಹಾಯಜ್ಞಂ - 2009
## ಶ್ರೀ ಶೈಲಂ

'' ಪಿರಮಿಡ್ ಸ್ಪಿರಿಚ್ಯುವಲ್ ಸೊಸೈಟೀಸ್ ಮೂವ್‌ಮೆಂಟ್ '' ಪ್ರತಿ ವರ್ಷ ಡಿಸೆಂಬರ್ 25 ರಿಂದ 31 ರವರೆಗೆ ನಡೆಯುವ ಧ್ಯಾನ ಮಹಾಯಜ್ಞಗಳು ಪಿರಮಿಡ್ ಮಾಸ್ಟರ್‌ಗಳಿಗೆ ಮಹಾ ವಿಜಯೋತ್ಸವಗಳು! ಪ್ರತಿಯೊಂದು ಧ್ಯಾನಯಜ್ಞವು ಪಿರಮಿಡ್‌ಸ್ಪಿರಿಚ್ಯುವಲ್ ಸೊಸೈಟೀಸ್ ಮೂವ್‌ಮೆಂಟ್‌ಗೆ ಒಂದೊಂದು ಅದ್ಭುತವಾದ ಮೈಲಿಗಲ್ಲು.

ಹಾಗಾದರೆ, ಈ ವರ್ಷ ... 2009 ಡಿಸೆಂಬರ್ 25 ರಿಂದ 31 ರವರೆಗೆ ಧ್ಯಾನಮಹಾಯಜ್ಞಂ ಶ್ರೀಶೈಲಂನಲ್ಲಿ ನಡೆಸುವುದಾಗಿ ಬ್ರಹ್ಮರ್ಷಿ ಪತ್ರೀಜಿ ಸಂಕಲ್ಪಿಸಿದ್ದಾರೆ ! ಸರಿಯಾದ ನಿಯಮಾವಳಿಯನ್ನು ರೂಪಿಸಿದ್ದಾರೆ ! ಈ 11ನೆಯ ಧ್ಯಾನಮಹಾಯಜ್ಞವು ಸಕಲ ಮಾನವಕೋಟಿಗೆ ಒಂದು ನೂತನ ಆಧ್ಯಾತ್ಮಿಕ ಪ್ರಗತಿಯನ್ನು ಒದಗಿಸುತ್ತದೆ ! '' 2012 ಡಿಸೆಂಬರ್ ಹೊತ್ತಿಗೆ ಏನೇನೋ ಉಪದ್ರವಗಳು ಉಂಟಾಗುತ್ತವೆಂದು T.V. Channels ಎಲ್ಲವೂ ಘೋಷಿಸುತ್ತಿವೆ. ಆಧ್ಯಾತ್ಮಿಕ ಸಂಸ್ಥೆಗಳೆಲ್ಲವೂ ಭೂಮಿಯು ಅಪಾರವಾದ ಕಾಂತಿಯನ್ನು ಒಟ್ಟುಗೂಡಿಸಿಕೊಂಡು, ಜ್ಞಾನವಂತವಾದ ಹೊಸ ಆಧ್ಯಾತ್ಮಿಕ ಪ್ರಪಂಚವು ಆವಿರ್ಭವಿಸುತ್ತದೆ. ಎಂದು ಕೂರಳೆತ್ತಿ ಸಾರುತ್ತಿವೆ!

**ನಮ್ಮ ತಕ್ಷಣದ ಕರ್ತವ್ಯ .... ?**

ಭೂಗೋಳದಲ್ಲಿ ಹಿಂಸಾ ಪ್ರವೃತ್ತಿಯನ್ನು ಪೂರ್ತಿಯಾಗಿ ಬದಲಾಯಿಸೋಣ! ಮಾಂಸಾಹಾರ ಭೂಗೋಳದಲ್ಲಿ ಹಿಂಸಾ ಪ್ರವೃತ್ತಿಯನ್ನು ಪೂರ್ತಿಯಾಗಿ ಬದಲಾಯಿಸೋಣ! ಮಾಂಸಾಹಾರವನ್ನು ಪೂರ್ತಿಯಾಗಿ ನಿಷೇಧಿಸೋಣ! ವೃಕ್ಷ ಸಾಮ್ರಾಜ್ಯವನ್ನು ಹಾಗೂ ಪ್ರಾಣಿ ಸಾಮ್ರಾಜ್ಯವನ್ನು ಕಾಪಾಡೋಣ! ಧ್ಯಾನ ಪ್ರಚಾರವನ್ನು ಹೆಚ್ಚಿಸೋಣ! ಈ ಆಶಯವನ್ನು ಸಾಧಿಸುವುದಕ್ಕಾಗಿ ಬ್ರಹ್ಮರ್ಷಿ ಪತ್ರೀಜಿಯವರು ಆಂಧ್ರಪ್ರದೇಶನಲ್ಲಿ ಶ್ರೀಶೈಲಂನಿಂದ ಧ್ಯಾನೋತ್ಸಾಹವನ್ನು ಮೊಳಗಿಸಲಿದ್ದಾರೆ. '' ಶ್ರೀ ಶೈಲಂ'' ಅಂದರೆ ಪರಶಿವನ ಸನ್ನಿಧಿ! ಶಿವನ ಯೋಗ ತತ್ವಕ್ಕೆ ಅದು ಪ್ರತೀಕ! ಶ್ರೀಶೈಲವು ಒಂದು ಮಹಾ ಶಕ್ತಿ ಕ್ಷೇತ್ರ. ಎಷ್ಟೋ ಯೋಗಿಗಳಿಗೆ ಇದು ನೆಲೆಯಾಗಿದೆ. ಇದೊಂದು ಯೋಗಭೂಮಿ! ಪ್ರಕೃತಿ ಮಾತೆಯ ಯೋಗಿಗಳಿಗೆ ಇದು ನೆಲೆಯಾಗಿದೆ. ಇದೊಂದು ಯೋಗಭೂಮಿ! ಪ್ರಕೃತಿ ಮಾತೆಯ ಮಡಿಲಲ್ಲಿ, ಶಿವಶಕ್ತಿ ಕ್ಷೇತ್ರದಲ್ಲಿ ಬ್ರಹ್ಮರ್ಷಿ ಪತ್ರೀಜಿ ಸಾಂಗತ್ಯದಲ್ಲಿ '' **ತಾಂಡವ ಶಿವ ಸಂಗೀತ ನೃತ್ಯ ಧ್ಯಾನ ಮಹಾಯಜ್ಞ – 2009**'' ನಲ್ಲಿ ಧ್ಯಾನವನ್ನು ಆಚರಿಸೋಣ! ಅಪಾರವಾದ ವಿಶ್ವಮಯ ಪ್ರಾಣಶಕ್ತಿಯನ್ನು ನಮ್ಮೊಳಕ್ಕೆ ತುಂಬಿಸಿಕೊಳ್ಳೋಣ! ಸೀನಿಯರ್ ಪಿರಮಿಡ್ ಮಾಸ್ಟರ್‌ಗಳ ಧ್ಯಾನಾನುಭವಗಳನ್ನು ಹಾಗೂ ಪತ್ರೀಜಿಯವರ ದಿವ್ಯ ಜ್ಞಾನ ಸಂದೇಶಗಳನ್ನು ಪಡೆಯೋಣ. ಈ ಜನ್ಮವನ್ನೇ ಕಡೆಯ ಜನ್ಮವನ್ನಾಗಿಸಿ .... ಮೋಕ್ಷವನ್ನು ಪ್ರಾಪ್ತಿಸಿಕೊಳ್ಳುವುದಕ್ಕೆ, ಲಕ್ಷಾಂತರ ಧ್ಯಾನ ಜನರ ಸಮ್ಮಿಲನದೊಂದಿಗೆ **ಧ್ಯಾನ ಪ್ರಪಂಚವನ್ನು ಸೃಷ್ಟಿಸೋಣ !!**

**ಚಲೋ ಶ್ರೀಶೈಲಂ ! ಚಲೋ ಶ್ರೀಶೈಲಂ ! ಚಲೋ ಶ್ರೀಶೈಲಂ !**

ಹಿಂದಿನ ಸಂಚಿಕೆಯಿಂದ...

# ಬಿಗ್ ಜಾಯ್ – ಗ್ರೇಟೆಸ್ಟ್ ಜಾಯ್

**ಡಾ|| ನ್ಯೂಟನ್:** ಮತ್ತೆ ನೀವು ಅವರ ಮನೆಯಿಂದ ಹೊರಗೆ ಹೋಗಲಿಲ್ಲವೇ, ಮತ್ತೆ ಅಲ್ಲಿಯೇ ಸ್ಥಿರವಾಗೇ ಇದ್ದೀರಾ?

**ಮಾರಂ ಶಿವಪ್ರಸಾದ್:** ಹೌದು ಸಾರ್, ಅಲ್ಲಿಯವರೆವಿಗೂ ತಾಳ್ಮೆಯಿಂದ ಇದ್ದ ನಾನು ' ಗೆಟೌಟ್ ' ಎಂದ ಮೇಲೆ ಬಹಳ ಕೋಪ ಬಂದು ಹೊರಗೆ ಹೊರಟು ಹೋದೆನು. ನನ್ನ ಹೆಂಡತಿ ಸಾರ್ ಮನೆಯಲ್ಲೇ ಇದ್ದಳು. ''ಈ ಧ್ಯಾನವೂ ಬೇಡ, ಈ ಗುರೂನೂ ಬೇಡ, ಈ ಪಿರಮಿಡ್ ಸೊಸೈಟಿ ಬೇಡವೇ ಬೇಡ'' ಎಂದುಕೊಂಡೆ. ಹುಚ್ಚನಂತೆ ಬೀದಿಯಲ್ಲಿ ಸ್ವಲ್ಪ ಹೊತ್ತು ಓಡಾಡಿದೆನು. ''ಪತ್ರೀ ಸಾರ್ ಹತ್ತಿರ ಬರದಿದ್ದರೇನು, ಧ್ಯಾನವನ್ನು ಏಕೆ ಬಿಡಬೇಕು? ನನ್ನ ಅನಾರೋಗ್ಯವೆಲ್ಲಾ ಅಜ್ಞಾನವೆಲ್ಲಾ ಹೋಗಿರುವುದು ಧ್ಯಾನದಿಂದಲೇ ಅಲ್ಲವಾ? ಎಂದೆನಿಸಿತು. ಮತ್ತೆ ಸ್ವಲ್ಪ ವೇಳೆಯ ನಂತರ, 'ಈತನ ಬೈಗಳು ಈಗ ಹೊಸದೇನೂ ಅಲ್ಲ' ಎಂದೆನಿಸಿತು. ಪುನಃ ಅವರ ಮನೆಗೆ ಹೋಗಿ, ಕಾಂಪೌಂಡ್‌ನಲ್ಲಿದ್ದ ತೆಂಗಿನ ಮರದ ಕೆಳಗೆ ಧ್ಯಾನ ಮಾಡುತ್ತಾ ಕುಳಿತುಕೊಂಡೆ. ''ಅವರು ಕರೆಯುವವರೆವಿಗೂ ಏಳಬಾರದೆಂದು ಸಂಕಲ್ಪ ಮಾಡಿದೆ. ನಿರ್ಮಲಮ್ಮ ಬಂದರು; ಪತ್ರಿ ಮೇಡಂ ಕರೆದರು, ನನ್ನ ಹೆಂಡತಿ ಬಂದು ಎಬ್ಬಿಸಿದಳು. ಆದರೆ, ನಾನು ಮಾತ್ರ ಕದಲಲೇ ಇಲ್ಲ. ಸುಮಾರು 3.45 ಘಂಟೆಗೆ ಗುಂತಕಲ್ ವೀರಾ ರೆಡ್ಡಿ ಬಂದು ''ಪತ್ರೀ ಸಾರ್ ಕರೆಯುತ್ತಿದ್ದಾರೆ ಎದ್ದೇಳಿ'' ಎಂದು ಹೇಳಿದರು. ಆ ತರುವಾಯ ಸ್ವಲ್ಪ ವೇಳೆಯ ನಂತರ ಎದ್ದು ನಿಧಾನವಾಗಿ ಪತ್ರೀಜಿಯವರ ಬಳಿ ಹೋಗಿ, ''ನನ್ನನ್ನು ಏಕೆ ಅಷ್ಟು ತೀವ್ರವಾಗಿ ಬೈದಿದ್ದೀರಾ ಅಷ್ಟು ಜನಗಳ ಮುಂದೆ?'' ನನ್ನ ಹೆಂಡತಿಯ ಮುಂದೆ? ಎಂದು ಕೇಳಿದೆನು. ಅವರು ತಾವು ಕುಡಿಯುತ್ತಿದ್ದ ಟೀ ಕಪ್ಪನ್ನು ನನ್ನ ಕೈಗೆ ಕೊಟ್ಟು ನನ್ನ ಕಣ್ಣಿನ ಕಡೆ ನೋಡುತ್ತಾ ''Enlightened Master ಯಾವಾಗಲೂ ಗತದಲ್ಲಿರುವುದಿಲ್ಲ, ನೀನು Enlightened Master'' ಎಂದರು. ಆಷ್ಟೆ ನಾನು ಜೋರಾಗಿ ನಗುತ್ತಾ ಟೀ ಕುಡಿದು ಪತ್ರೀಜಿಯವರಿಗೆ ನಮಸ್ಕಾರ ಮಾಡಿ ಹೊರಟುಹೋದೆನು.



**ಡಾ|| ನ್ಯೂ :** ಮಾಮೂಲಾಗಿ ಈ ತರಹ ಸಂದರ್ಭಗಳಲ್ಲಿ ಬಹಳ ವಾರಗಳು, ತಿಂಗಳುಗಳು, ಕೆಲವು ಸಲ ವರ್ಷಗಳು ಸಹ ಬೇಕುತ್ತದೆ ಕೆಲವರಿಗೆ ಆ ಸ್ಥಿತಿಯಿಂದ ಹೊರಗೆ ಬರುವುದಕ್ಕೆ ಮತ್ತೆ ನಿಮಗೆ ನೋಡಿ ಆ ಒಂದು ಸಿವಿಯರ್ and Serious ಹಿಟ್‌ನಿಂದ Transformation ಪೂರ್ತಿಯಾಗಿ, Enlightenment ಉಂಟಾಗಿದೆ! ಹೀಗೆಯೇ ಇರುತ್ತದೆ Spirituality ಅಂದರೆ, ''ಧ್ಯಾನ ಮಹಿಮೆ'' ಇದೇ! Miracles ಹೊರಗೆ ನೋಡಬೇಕೆಂದು ಕೊಳ್ಳುತ್ತಾರೆ ಮನುಷ್ಯರು, ಅವುಗಳೆಲ್ಲಾ ನಮ್ಮಲ್ಲಿಯೇ ಆಗಾಗ ಜರುಗುತ್ತಿರುತ್ತದೆ. Wonderful and Great Momentsಗಳು ಅವು ನಿಮಿಗೆ.

**ಮಾ:** ಆ ಸಮಯದಲ್ಲಿ ಅವರಲ್ಲಿ ಒಬ್ಬ ಪರಶುರಾಮ ಒಬ್ಬ ನರಸಿಂಹಸ್ವಾಮಿ ನನಗೆ ಕಾಣಿಸಿದರು!

**ಡಾ|| ನ್ಯೂ:** ಮಾಸ್ಟರ್‌ದು ಎಲ್ಲಾ Behavior ಹಾಗೇ ಇರುತ್ತೆ. ಆ ಸಮಯದಲ್ಲಿ Many things realization ಆಗುವುದಕ್ಕೆ ಅವರು Penetrate ಮಾಡುತ್ತಾರೆ. ಹಾಗೆ, ಅವರು ಬಂದು ನಮ್ಮ ಹೃದಯಕ್ಕೆ ಮುಟ್ಟುವಂತೆ ಗಟ್ಟಿಯಾಗಿ ತಿಳಿಸಿದರೆ ಮಾತ್ರ, ಮನಸ್ಸಿನಲ್ಲಿರುವ ಮುಚ್ಚಿರುವ ಬಾಗಿಲು ತೆರೆದುಕೊಳ್ಳುತ್ತದೆ. ಮತ್ತೊಂದು ರೀತಿಯಲ್ಲಿ ಹೇಳಬೇಕೆಂದರೆ ಅದು ತೆಗೆದುಕೊಳ್ಳದೆ ಇರಲಾಗುವುದೇ ಇಲ್ಲ. ಎಷ್ಟು ಜನ್ಮಗಳು ಕಳೆದರೂ ಸರಿ. Masters chop our ego! They chop our negatives! ನೂರಾರು ಜನಗಳನ್ನು ಅವರು ಒಂದು ಗ್ರೂಪ್‌ನಲ್ಲಿರುವ ಮನುಷ್ಯರಲ್ಲಿ Maturityಗೆ ಇಲ್ಲವೆ Enlightenmentಗೆ ಹತ್ತಿರವಾಗಿರುವವರನ್ನು ತಮ್ಮ ಮೂರನೇ ಕಣ್ಣಿನಿಂದ ಗಮನಿಸಿ ಹೀಗೇ ಮಾಡಿ, ಒಂದು ಮಾಸ್ treatment ಕೊಡುತ್ತಾರೆ. ಎಷ್ಟೋ ಜನ ಆದರಿಂದ ಉಪಯೋಗ ಪಡೆಯುತ್ತಾರೆ. ಮಾಸ್ಟರ್‌ಗಳಲ್ಲಿ Unconventional approaches ಇರುತ್ತವೆ. ಈ ಬಗ್ಗೆ ಅವರು ಕ್ಲಾರಿಫಿಕೇಷನ್ ಕೊಡುವುದಿಲ್ಲ. ''ಬೆಂಕಿಯ ಮೇಲೆ ಸುಗಂಧ''ದ ಹಾಗೆ ಇರುತ್ತಾರೆ. ಮಾಮೂಲಾಗಿ ನಾವು ಅರಿತುಕೊಂಡಂತೆ ಗುರುಗಳು ಇರುವುದಿಲ್ಲ. ಆದುದರಿಂದಲೇ, ನಿಮಗೆ



ಪತ್ರೀಜೀಯವರು ಆ ದಿವಸ ಒಬ್ಬ ನರಸಿಂಹಸ್ವಾಮಿಯಾಗಿ, ಒಬ್ಬ ಪರಶುರಾಮರಂತೆ ಕ್ರೋಧಾಗ್ನಿ ಜ್ವಾಲೆಯಂತೆ ಕಾಣಿಸಿದರು. Master is rootless while in truth! 'Rootless' ಎಂದರೆ, ಸ್ವಲ್ಪವೂ ಆಲೋಚಿಸದೆ ಮಡಕೆಯನ್ನು ಕೋಲಿನಿಂದ ಬಡಿದ ಹಾಗೆ ವರ್ತಿಸುತ್ತಾರೆ, ಇರುವುದೋ ಅಥವಾ ಹೋಗುವುದೋ, 'ಸಾವೋ,' 'ಬದುಕೋ,' ಸಾವು ಎಂದರೆ, ಸಾಧನೆಯಿಂದ ಹಿಂದಕ್ಕೆ ಹೋಗಿ ಮತ್ತೆ ಮತ್ತೆ ಬೀಳುತ್ತಾ ಏಳುತ್ತಾ, ಸಾಯುತ್ತಾ ಬದುಕುತ್ತಾ ಇರುವುದು. 'ಬದುಕು' ಎಂದರೆ ಒಬ್ಬ Enlightened ಮಾಸ್ಟರಾಗಿ ತಯಾರಾಗುವುದು.

**ಮಾ:** ಮತ್ತೆ ಈ ತರಹದವರಲ್ಲಿ ಕೆಲವು ಜನಗಳನ್ನು ಆರಿಸಿ ತಯಾರು ಮಾಡುತ್ತಾರಾ ಪತ್ರೀ ಸಾರ್, ಇಲ್ಲವೆ ಸರಿಯಾಗಿ ತಿದ್ದುವುದಕ್ಕೋಸ್ಕರ ತಯಾರಾಗಿ ಸಿದ್ಧವಾಗಿ ಇರುತ್ತಾರಾ?

**ಡಾ॥ ನ್ಯೂ:** ಬೆರಳಲ್ಲಿ ಎಣಿಸುವಷ್ಟು ಜನಗಳು ಆ ತರಹ ಇರುತ್ತಾರೆ. ಯಾರು ಆ Evolutionಗೆ ಆತ್ಮಗತವಾಗಿ, ಸಿದ್ಧರಾಗುತ್ತಾರೋ ಅವರನ್ನೇ ಅಷ್ಟು ಕುತೂಹಲದಿಂದ ಸಿದ್ಧರಾಗುತ್ತಾರೆ. ನಿಮಗೆ 2003ರಲ್ಲಿ ನಡೆದಿರುತ್ತೆ, ನನಗೆ ಅವರ ಮೊದಲ ಪರಿಚಯದಲ್ಲಿ 1989ರಲ್ಲಿ ನಡೆದದ್ದೂ ಆದೇ. ಯಾರಿಗೆ ಆ ಸಂದರ್ಭವು ಒದಗಿ ಬಂದಿರುತ್ತದೋ ಆಗ ಅವರನ್ನು ಆಯಾ ಸ್ಟೇಜ್‌ನಲ್ಲಿ "ಟಚ್" ಮಾಡುತ್ತಾರೆ. When disciple is ready Guru appears ಎಂದು ಅದಕ್ಕೆ ಹೇಳುತ್ತಾರೆ.

**ಮಾ:** ನಿಮ್ಮ Past life regression ಪ್ರಕ್ರಿಯೆ ಯಾವಾಗ ಹೇಗೆ ಪ್ರಾರಂಭವಾಯಿತು ?

**ಡಾ॥ ನ್ಯೂ:** 1990ರಲ್ಲಿ ಪ್ರಾರಂಭವಾಗಿರಬೇಕು ಒಂದು ದಿವಸ ನಮ್ಮ ಅಜ್ಜಿಯ ಮುಂದೆ ಕುಳಿತುಕೊಂಡಿದ್ದೆನು. ಆಕೆಯನ್ನು ಸಹ Regression ಮಾಡಿದೆ. ಅದು ನನ್ನ ಅಂತರ್ ಪ್ರೇರಣೆಯಿಂದ ನಡೆಯಿತು. ಹೀಗೆ ಮಾಡಿದರೆ ಮನುಷ್ಯರನ್ನು ಅವರ ಗತಕಾಲದ, ಗತ ಜನ್ಮಕ್ಕೆ ತೆಗೆದುಕೊಂಡು ಹೋಗಬಹುದು ಎಂದು ತಿಳಿಯಿತು. Regression ಮಾಡಿ ಆಕೆಯನ್ನು ಪಾಸ್ಟ್‌ಲೈಫ್ಗೆ ಕರೆದುಕೊಂಡು ಹೋದೆನು. ಅನಂತರ, ಈ ಅದ್ಭುತವಾದ, ಹೊಸದಾದ ಅನುಭವವನ್ನು ಪತ್ರೀಜಿಯವರಿಗೆ ವಿವರಿಸಿ ಹೇಳಿದೆನು. ಅವರು ಬಹಳ ಶ್ರದ್ಧೆಯಿಂದ ಕೇಳಿ, ನಿಂತುಕೊಂಡು ನನ್ನನ್ನು ತಬ್ಬಿಕೊಂಡು ಎಷ್ಟೋ ಆನಂದ ಪಟ್ಟರು. ಆದನ್ನು ಹೇಳಲು ಸಾಧ್ಯವೇ ಇಲ್ಲ. "ನಾನು ಇದಕ್ಕೋಸ್ಕರವೇ ಕಾಯುತ್ತಿದ್ದೆ. ನಮ್ಮ ಗ್ರೂಪ್‌ನಲ್ಲಿ ನೀನು ಇನ್ನು ಮುಂದೆ ಕೀರೋಲ್ ಪ್ಲೇ ಮಾಡುತ್ತೀಯ" ಎಂದರು. ಪತ್ರೀಜಿಯವರ ಈ ಅಭಿನಂದನೆಯಿಂದ ನಾನು ಆ ದಿವಸ ಹೊಂದಿದ ಆನಂದ ಅಷ್ಟಿಷ್ಟಲ್ಲ. ಜನ್ಮದಲ್ಲಿ ನಾನು ಮರೆಯಲಾರದಂತಹ ಮಧುರಾನುಭೂತಿ ಇದೇ. ನಾನು MBBS ಪಾಸಾದ ಕ್ಷಣದಲ್ಲಾಗಲೀ, MD ಪೂರ್ತಿ ಮಾಡಿದಾಗ ಆಗಲಿ ಹೊಂದದೇ ಇರುವಂತಹ ಭಾವಪರವಶವನ್ನು ಹೊಂದಿದೆನು.

**ಮಾ:** ಅಭಿನಂದನೆ ಸಾರ್! ಮತ್ತೆ ನೀವು ಎಷ್ಟು Regression ಮಾಡಿದ್ದೀರ ಆಗಿನಿಂದ?

**ಡಾ॥ ನ್ಯೂ:** ಅನಂತರ, ಪತ್ರೀಜಿ ಕೊಟ್ಟ Inspirationನಿಂದ ಪ್ರೋತ್ಸಾಹದೊಂದಿಗೆ ಎಷ್ಟೋ ಜನಗಳಿಗೆ Regression ಮಾಡಿದೆನು. Individual ಆಗಿ, ಗ್ರೂಪ್‌ನಲ್ಲಿ ,Batchನಲ್ಲಿ ಸುಮಾರು ಪ್ರತಿ ದಿವಸ ಒಂದು Regression ಕಮ್ಮಿಯಿಲ್ಲದಂತೆ ಮಾಡಿರುತ್ತೇನೆ. ಒಟ್ಟಾರೆ ಸುಮಾರು ಸಾವಿರಾರು ಮಂದಿಗೆ ಇದುವರೆವಿಗೂ ಮಾಡಿರುತ್ತೇನೆ! ಪ್ರತಿ ದಿವಸ ಕೇಳಿ ಕೇಳಿ, ಚುಚ್ಚಿ ಚುಚ್ಚಿ ತಿಳಿದುಕೊಳ್ಳುವವರು ಪತ್ರೀಸಾರ್ ನಾನು ಕನ್ಸೋಲಿನಲ್ಲಿರುವವರೆವಿಗೂ!

**ಮಾ:** ಆ ರಿಗ್ರೇಷನ್ ಹೇಗಿದೆ? ಕೆಲವು ಉದಾಹರಣೆಯನ್ನು ತಿಳಿಸಿ?

**ಡಾ॥ ನ್ಯೂ:** ಒಬ್ಬರು ಬೇರೆ ಭಾಷೆಯನ್ನು ಮಾತನಾಡುತ್ತಾರೆ. ಮತ್ತೊಬ್ಬರು ಸನ್ನೆ ಮಾಡುತ್ತಾರೆ. ಇನ್ನೊಬ್ಬ ಮಹಿಳೆ ವಿಪರೀತವಾಗಿ ಪ್ರವರ್ತಿಸುತ್ತಾಳೆ. ಮತ್ತೊಬ್ಬರು ಮಕ್ಕಳಂತೆ ನಡೆದುಕೊಳ್ಳುತ್ತಾರೆ. ಅವರವರ ಜನ್ಮಗಳನ್ನು ನೋಡಿಕೊಳ್ಳುತ್ತಿದ್ದರು. ಎಲ್ಲವೂ 'Trance State' ನಲ್ಲಿ ಹೇಳುವವರು. ಕೆಲವು ಜನ ಗಂಡಸರು ಹೆಂಗಸರಂತೆ ಅಲಂಕಾರ ಮಾಡಿಕೊಳ್ಳಬೇಕೆಂದು ಒಳಗೆ ತಹತಹ ಗುಟ್ಟುತ್ತಾರೆ. ಕೆಲವು



ಜನ ಹೆಂಗಸರು ಗಂಡಸರಂತೆ ಇರುವುದಕ್ಕೆ ಇಷ್ಟಪಡುತ್ತಾರೆ. ಮೇಲೆ ನೋಡಲು ಕೆಲವರು ಮೆತ್ತಗೆ ಇರುತ್ತಾರೆ. ಒಳಗೆ ಕೆಟ್ಟದ್ದನ್ನು ಆಲೋಚಿಸುತ್ತಿರುತ್ತಾರೆ. ಮೇಲೆ ನೋಡಲು ಕೆಲವರು ಕಠಿಣವಾಗಿರುತ್ತಾರೆ. ಒಳಗೆ ಮಲ್ಲಿಗೆ ಹೂವಿನ ಹಾಗೆ ಹೃದಯವಿರುತ್ತದೆ. ವಿಧವೆಯಾದವರು, ಹೆಂಡತಿಯನ್ನು ಕಳೆದುಕೊಂಡವರು, ಅಂಗವಿಕಲರು, ಮನೋವ್ಯಾಧಿಗ್ರಸ್ಥರು, ಹೀಗೆ ಎಷ್ಟೋ ಬೇರೆ ಬೇರೆ Anglesನಲ್ಲಿ Different Mentality, Different Psychologyನ್ನು ಎಷ್ಟೋ Study ಮಾಡಿದ್ದೇನೆ. ನಾನು ಹಾಗೆ ಮಾಡುತ್ತಾ, ಆಗಾಗ ಪತ್ರೀಜಿಯವರ ವಿವರಣೆಯಿಂದ, ಹೊಸ ಆಲೋಚನೆಯಿಂದ, ಅವರ ಸಲಹೆಯಿಂದ ನಾನು ಒಬ್ಬ "World Class Regretionist" ಆಗಿ ಬದಲಾಗಲು ಪತ್ರೀಜಿಯವರ ಪ್ರೋತ್ಸಾಹವೇ ಕಾರಣ. ಅವರು ಮಾಡಿದ ಕೃಷಿಯನ್ನು ಮರೆಯಲಾಗುವುದಿಲ್ಲ. ಇದು ನೂರಾರು ಮತ್ತು ಸಹಸ್ರಾರದಲ್ಲಿ ಅವರು ಇಟ್ಟ ಬಿಕ್ಷೆ.

**ಮಾ:** ಪತ್ರೀಜಿಯವರ ಮೇಲೆ ನಿಮಗಿರುವ ಶ್ರದ್ಧೆ ಮತ್ತು ಗೌರವ ಭಕ್ತಿಯ ಮಹಿಮೆ, ನನಗೆಷ್ಟೋ ನನ್ನನ್ನು ನಾನು ನೋಡಿಕೊಂಡಂತೆ ಇದೆ. ಮತ್ತೆ ಇಷ್ಟು ಸಾವಿರ Regression ಮಾಡಲು ಎಷ್ಟು ಸಾಹಸ ಮತ್ತು ತಾಳ್ಮೆಯು ನಿಮ್ಮಲ್ಲಿ ಹೇಗಿದೆ. ನೀವು ಬಹಳ ನಿಧಾನ ಗುಣ. ಚಿಕ್ಕ ವಯಸ್ಸಿನಿಂದಲೂ ಹೀಗೆಯೇ ನೀವು ಇರುವಿರಾ ?

**ಡಾ|| ನ್ಯೂ:** ನಾನು Smooth ಆಗಿ ಇರುವುದಕ್ಕಿಂತ ಚಿಕ್ಕವನಿರುವಾಗಲೇ ನಾನು ಬಹಳ ಸಮಾಧಾನವಾಗಿ ಇರುತ್ತಿದ್ದೆ. ನಮ್ಮ ತಂದೆಯವರು ನೆಲ್ಲೂರಿನಲ್ಲಿ ''ರತ್ನಂ ಕೋಚಿಂಗ್ ಸೆಂಟರ್'' ನಡೆಸುತ್ತಿದ್ದರು ಎಂಬುದು ಎಲ್ಲರಿಗೂ ತಿಳಿದಿತ್ತು. ನಾನು ಓದು Relax ಆಗಿಯೇ ಓದಿಕೊಂಡೆನು. ನಮ್ಮ ತಂದೆ ನನಗೆ ಚೆನ್ನಾಗಿ ಹಣ ಕೊಡುತ್ತಿದ್ದರು. ಪತ್ರೀಜಿಯವರು ಬಹಳ ಸ್ನೇಹವಾಗಿ, ಆದರದಿಂದ ಪ್ರೋತ್ಸಾಹಕರವಾಗಿ ಇರುವುದು, ಧ್ಯಾನದಲ್ಲಿ ಬಹಳ ಆಳವನ್ನು ನೋಡುವುದು ನನಗೆ Regression ಮಾಡುವುದರಲ್ಲಿ Plus Point ಆಯಿತು. ದೇಶ ವಿದೇಶದಲ್ಲಿ ತಿರುಗಾಡಲು ಬಹಳ ಧೈರ್ಯವು ಬಂದಿತು. ನಮ್ಮ ತಂದೆಯು, ಗಾಡ್ ಫಾದರ್ ಈ ಇಬ್ಬರಿಂದಲೇ ನಾನು ಹೀಗಿದ್ದೇನೆ.

**ಮಾ:** ನೀವು ಯಾವಾಗಿನಿಂದ '' Regression Sessions''ನ್ನು ರೆಕಾರ್ಡ್ ಮಾಡಲು ಪ್ರಾರಂಭಿಸಿದಿರಿ? ಯಾರು ಇದನ್ನು ಕಾಪಾಡುತ್ತಾರೆ? ಶ್ರೀದೇವಿ, ಲಕ್ಷ್ಮೀ ಮೇಡಂ?

**ಡಾ|| ನ್ಯೂ:** 1990 ರಿಂದ ನಾನು ರಿಗ್ರೇಷನ್‌ನ್ನು ರಿಕಾರ್ಡ್ ಮಾಡಲು ಪ್ರಾರಂಭ ಮಾಡಿದೆನು. ನನ್ನ ಹೆಂಡತಿ ಲಕ್ಷ್ಮೀ ಮತ್ತು ನಾನು ಜೊತೆಯಲ್ಲಿ ದೇಶ ವಿದೇಶದಲ್ಲಿ ಓಡಾಡುತಿದ್ದೇವೆ. ಶ್ರೀದೇವಿ ಮೇಡಂ ಎಲ್ಲಾ ರಿಕಾರ್ಡ್‌ಗಳನ್ನು ಕಾಪಾಡುತ್ತಿದ್ದಾರೆ.

**ಮಾ:** ಮತ್ತೆ Regressionನಲ್ಲಿ ನೀವು ಒಳ್ಳೆಯ ಅನುಭೂತಿಯನ್ನು ಹೊಂದಿದ ಸಂದರ್ಭ ಯಾವುದು ?

**ಡಾ|| ನ್ಯೂ:** ಒಂದು ಸಾರಿ ಪತ್ರೀಜಿಯವರನ್ನು ರಿಗ್ರೆಷನ್ ಮಾಡಿ ಎಂದು ಕೇಳಿದೆವು. ಮಾಡುವುದಕ್ಕೆ ನಮ್ಮ ಶಕ್ತಿಯನ್ನೆಲ್ಲಾ ಬಿಟ್ಟು ಪ್ರಯತ್ನಿಸಿದೆವು. ಅವರು ರಿಗ್ರೆಷನ್‌ನಲ್ಲಿ ಹೋದಂತೆ ನಟಿಸಿದರು! ನಾನು ಆ ಸಂದರ್ಭವನ್ನು ಬಹಳ ಚೆನ್ನಾಗಿ ಎಂಜಾಯ್ ಮಾಡಿದೆನು. ಆತ್ಮಾನುಭೂತಿ, ಒಂದು ಬ್ರಹ್ಮಾನಂದ. ಅವರಿಗೆ ತನ್ನ ಗತಜನ್ಮದ ನೆನಪು ಪೂರ್ತಿ ಇದೆ. ಅವರು ಎಷ್ಟೋ ಸಹಸ್ರಾರಗಳನ್ನು ಪೂರ್ತಿ ಮಾಡಿದ ಮಾಸ್ಟರ್. ಆದುದರಿಂದ, ಅವರ ಮೂರನೆಯ ಕಣ್ಣು ಪ್ರತ್ಯೇಕವಾಗಿ ತೆರೆದುಕೊಂಡು ಇದೆ ಎಂಬುದು ಏನೂ ಇಲ್ಲ, Only Direct Knowing! ಆದರೂ, ಅವರನ್ನು Regression ಮಾಡುವ ಸಾಮರ್ಥ್ಯ ಯಾವ ಮನುಷ್ಯರಿಗೂ ಇರುವುದಿಲ್ಲ. ಅವರು ''Infinite State Guru!''

**ಮಾ:** ಮತ್ತೆ 1994 ತರುವಾಯ ಕರ್ನೂಲ್‌ನಿಂದ ಹೊರಗೆ ಬಂದಾಗ ಅವರ ಸನ್ನಿಧಿಯಲ್ಲಿರುವ ವಿಶ್ಲೇಷಣೆ, ವಿಶೇಷತೆ ಕ್ರಮ ಕ್ರಮವಾಗಿ ಹೇಗೆ ಎನಿಸುತ್ತದೆ?

**ಡಾ॥ ಸ್ನೋ:** ತದನಂತರ, ಅವರಿಂದ 1994 ರಲ್ಲಿ ಹೊರಗೆ ಬಂದ ತರುವಾಯ ನೆಮ್ಮದಿಯಾಗಿ ಆ Input ನನಗೆ ಅರ್ಥವಾಯಿತು. ಅವರೊಡನೆ ಕಳೆದ ಪ್ರತಿ ಕ್ಷಣವೂ, ಪ್ರತಿ ಅನುಭವವೂ ಒಂದು ವಿಶಿಷ್ಟವಾದ ಅನುಭವ. ಅವರು ನನ್ನೊಡನೆ ನುಡಿದ ಪ್ರತಿ ಮಾತುಗಳೂ ನನಗೆ ಒಂದೊಂದು ಬೀಜಗಳಿದ್ದಂತೆ. ಬಹಳ ಡೀಪ್ ಇಂಪಾಕ್ಟ್ ಆಯಿತು. ಅವು ನನ್ನ ಜೀವನದ ಮೇಲೆ, ಆ ಪ್ರತಿ ಬೀಜವು ನನ್ನಲ್ಲಿ ಹೊರಗೆ ಒಂದು ಮೊಗ್ಗಾಗಿ, ಹೂವಾಗಿ, ಕಾಯಾಗಿ, ಹಣ್ಣು ಆಗಲು ಪ್ರಾರಂಭವಾಯಿತು.

**ಮಾ:** ಅಂದರೆ, ಒಂದೊಂದು ಹಣ್ಣು ನಿಮ್ಮ ಸಹಸ್ರಾರಾದಲ್ಲಿ ಒಂದೊಂದು ವಿಕಸಿತ ಕಮಲದ ರೆಕ್ಕೆ ಎಂದು ಹೇಳಿಕೊಳ್ಳಬಹುದು?

**ಡಾ॥ ಸ್ನೋ:** ''ಸಹಸ್ರಾರದಲ್ಲಿ ಬಿಚ್ಚಿರುವ ರೆಕ್ಕೆಗಳು'' ಎಂದು ಹೇಳಬಹುದು! ಏಕೆಂದರೆ, 1994 ವರೆಗೂ ನಾನು Immature ಆಗಿಯೇ ಇದ್ದೆನು. ನನ್ನ ''ಮಾಸ್ಟರ್'' ನನಗೆ ತಿಳಿಯದು ಪತ್ರೀಸಾರ್ ಹತ್ತಿರ ಇದ್ದು ಮೆಡಿಟೇಶನ್ ಮಾಡುತ್ತಾ, ಅನುಭವಗಳನ್ನು ಹೊಂದುತ್ತಾ, ಕುಡಿಯುತ್ತಾ, ಕುಣಿದಾಡುತ್ತಾ ಏನೇನು ವ್ಯಸನಗಳು ಇರುವವೋ ಅವುಗಳನ್ನು ನಾವು ಮಾಡಿದೆವು. "ಕಾಮಿಯಾಗದವನು ಮೋಕ್ಷಗಾಮಿ ಆಗಲಾರ." ಎನ್ನುವ ನಾಣ್ಣುಡಿ ನನ್ನ ವಿಚಾರದಲ್ಲಿ ನಿಜವಾಗಿದೆ. ಪತ್ರಿಸಾರ್ ಜೊತೆ ನನ್ನ ಕನೆಕ್ಷನ್ ಜನ್ಮ ಜನ್ಮಗಳಿಂದ ಬಂದಿರುವುದು.

**ಮಾ:** ಈ ಜನ್ಮದಲ್ಲಿ ಅದು ಪರಿಪೂರ್ಣವಾಗಿದೆಯಾ? ಈ ಡಿವೈನ್ ಕನೆಕ್ಷನ್‌ನಿಂದ ನೀವು ಮೂರು ಜನಗಳಿಗೆ?

**ಡಾ॥ ಸ್ನೋ:** ಹೌದು ನನಗೆ, ಪಾಲ್‌ಗೆ, ಯುಗಂಧರ್‌ಗೆ ಅವರೊಡನೆ ಇದ್ದ Very deep connection fulfill ಆಗಿದೆ. ಹೊರಗೆ ಬಂದ ತರುವಾಯ We started realizing, we started innovating! ಅದು ಯಾವಾಗಲೂ ಹೋಗುವುದಿಲ್ಲ.

**ಮಾ:** ನೀವು ಯಾವುದಾದರೂ ಮುಂದಿನ Plan ಮಾಡುತ್ತೀರಾ 1994ರ ಮುಂದೆ 'ಧ್ಯಾನಾಂಧ್ರಪ್ರದೇಶ್', 'ಧ್ಯಾನಭಾರತ್ ', 'ಧ್ಯಾನಜಗತ್' ಇವುಗಳನ್ನು ಕುರಿತು ಹೇಳಿ!

**ಡಾ॥ ಸ್ನೋ:** ಹೌದು ಆಗಲೇ ನಮಗೆ ಬಹಳ Plan ಇತ್ತು. 1991ರಲ್ಲಿ ಧ್ಯಾನದ ಅನುಭವವನ್ನು ಪತ್ರೀಜೀಯವರೊಡನೆ ಹಂಚಿಕೊಳ್ಳುತ್ತಿರುವಾಗ, ''ಈ ಭೂಮಂಡಲವೆಲ್ಲಾ ಧ್ಯಾನವನ್ನು ಹೇಗೆ ಪ್ರಚಾರ ಮಾಡಬೇಕು? ಹೇಗೆ ಹೆಚ್ಚು ಜನಗಳಿಗೆ, ಹೆಚ್ಚಾಗಿ ಬೇಗ ತಿಳಿಸುವುದು?'' ಎಂದು ಪ್ಲಾನ್ ಮಾಡಿಕೊಳ್ಳುತ್ತಿದ್ದೆವು. ಆದರೆ, ಆಗ ನನಗೆ, ನಾನು ಒಬ್ಬ ಪ್ರಸಿದ್ಧ Past life regretionist ಆಗುತ್ತೇನೆ ಎಂದು, ವಿದೇಶವನ್ನು ತಿರುಗಾಡುತ್ತೇನೆ ಎಂದು ಊಹೆ ಸಹ ಮಾಡಿರಲಿಲ್ಲ!

**ಮಾ:** ಈಗ ನೀವು ಎಷ್ಟೋ ದೇಶಗಳನ್ನು ತಿರುಗುತ್ತಿದ್ದೀರಲ್ಲವೇ? ಮತ್ತೆ ನಿಮಗೆ ಯಾವ ದೇಶ ಇಷ್ಟವಾಗಿದೆ?

**ಡಾ॥ ಸ್ನೋ:** ನಾನು ಎಷ್ಟು ದೇಶಗಳನ್ನು ಸುತ್ತಿದರೂ ಸಹ ಭಾರತ ದೇಶವೇ ಇಷ್ಟವಾಗಿದೆ. ನಾನು ನನ್ನ ದೇಶವನ್ನು ಬೇರೆ ದೇಶಗಳಿಗಿಂತ ಹೆಚ್ಚು ಇಷ್ಟ ಪಡುತ್ತೇನೆ. ಇಲ್ಲಿರುವಷ್ಟು ಯೋಗಿಗಳು ಮತ್ತೆಲ್ಲಿಯೂ ಇಲ್ಲ.

**ಮುಂದುವರೆಯುವುದು...**

## 96 ಗಂಟೆಗಳ ವರೆಗೂ ಶ್ವಾಸಾಹಾರದಿಂದಿದ್ದ ಅಂತರ್ ಪ್ರಯಾಣಿಗ



ಹಿಂದೊಮ್ಮೆ ಸುಮಾರು ವರ್ಷಗಳ ಹಿಂದೆ ಆಂಧ್ರಪ್ರದೇಶದ ವೀರ ಬ್ರಹ್ಮೇಂದ್ರ ಸ್ವಾಮಿಯವರು ಹೇಳಿದ ಮಾತು "ತಮ್ಮ ಶಿಷ್ಯನಾದ ಸಿದ್ದನು ಮುಂದೆ ಬಾಲಯೋಗಿಎಂಬ ಹೆಸರಿನಲ್ಲಿ ಜನ್ಮವೆತ್ತಿ ಅನ್ನ ನೀರು ಇಲ್ಲದೆ ಕೇವಲ ಶ್ವಾಸಾಹಾರದಿಂದ ಜೀವಿಸುವವನು ಎಂದು ಹೇಳಿದ್ದರು." ಆದರೆ ಇಂದು ನಾವೆಲ್ಲಾ ಗರ್ವದಿಂದ ಮತ್ತು ಹೆಮ್ಮೆ ಪಡುವ ವಿಷಯವೇನೆಂದರೆ ಬ್ರಹ್ಮರ್ಷಿ ಸುಭಾಷ್ ಪತ್ರೀಜಿಯವರ ಜ್ಞಾನವನ್ನು ಪಡೆದು ಪಿರಮಿಡ್ ಸೊಸೈಟಿಯ ಪ್ರತಿಯೊಬ್ಬರೂ ಸಾಧನೆಯಿಂದ ಬಾಲಯೋಗಿಗಳಾಗಬಹುದು ಎನ್ನುವುದಕ್ಕೆ ಸಾಕ್ಷಿ - ಶ್ರೀ ಕೃಷ್ಣ ಪಿರಮಿಡ್ ಧ್ಯಾನ ಕೇಂದ್ರ ಸಿರಿಗುಪ್ಪ ಸದಸ್ಯರಾದ ಶ್ರೀನಾಗಭೂಷಣಪ್ಪರವರು. ಇವರು ಮೂರು ವರ್ಷಗಳಿಂದ ಪ್ರತಿ ದಸರಾ ಹಬ್ಬದ ಮುಂದೆ ಈ ಧ್ಯಾನ ಜಗತ್ತಿಗೆ ಏನಾದರೂ ಸಾಧಿಸಿ ತೋರಿಸುವ ಛಲ. ಅದೇ ಪ್ರಕಾರ ಈ ದಸರಾ ಹಬ್ಬದ ಪ್ರಯುಕ್ತವಾಗಿ, ಸೆಪ್ಟೆಂಬರ್ 21, 2009 ಸೋಮವಾರ ಸಂಜೆ 6 ಗಂಟೆಗೆ ಕುಳಿತವರು ಸೆಪ್ಟೆಂಬರ್ 25,2009 ಶುಕ್ರವಾರ ಸಂಜೆ 6 ಗಂಟೆಯವರೆಗೂ ಯಾವುದೇ ಆಹಾರ ಫಲ, ನೀರಿಲ್ಲದೇ ಕೇವಲ ಶ್ವಾಸಾಹಾರದಿಂದಿದ್ದು ಅದ್ಭುತವಾಗಿ ನಾಲ್ಕು ದಿನಗಳ ಅಖಂಡ ಧ್ಯಾನವನ್ನು ಮುಗಿಸಿದರು. ಜೊತೆಗೆ ಆ 4 ದಿಗಳಲ್ಲಿ ಸೂಕ್ಷ್ಮ ಶರೀರ ಯಾನದ ಜೊತೆಗೆ ಅದ್ಭುತ ಆನಂದ ಪಡೆದು ಸೃಷ್ಟಿಯ ಎಲ್ಲಾ ಸೊಬಗನ್ನು ಆಸ್ವಾದಿಸಿದ್ದಾರೆ.

**-ವಿಷಯ ಸಂಗ್ರಹಣೆ : ಎಸ್. ಎಂ. ಸುಮಂಗಳ, ಸಿರುಗುಪ್ಪ**

# ಮಾನಸ ಸರೋವರ, ಕೈಲಾಸ ಪರ್ವತ ಮತ್ತು ನೇಪಾಳದಲ್ಲಿ - ಧ್ಯಾನ ಯಾತ್ರೆ

ಜೂನ್ 2009 ತಿಂಗಳಿನಲ್ಲಿ ತಿರುಪತಿಯ ಪಿರಮಿಡ್ ಧ್ಯಾನ ಕೇಂದ್ರದಿಂದ ಮಾನಸ ಸರೋವರ ಮತ್ತು ಕೈಲಾಸ ಪರ್ವತ ಧ್ಯಾನ ಯಾತ್ರೆಯನ್ನು ಶ್ರೀ ಕಂಚಿ ರಘುರಾಂರವರ ಸಂಚಾಲಕತ್ವದಲ್ಲಿ ಏರ್ಪಾಟಾಗಿತ್ತು. .

ಕೈಲಾಸ ಪರ್ವತವು ಸಮುದ್ರಮಟ್ಟದಿಂದ 22,000 ಸಾವಿರ ಅಡಿ ಎತ್ತರದಲ್ಲಿರುವುದರಿಂದ, ಅಲ್ಲಿ ಆಕ್ಸಿಜನ್ ಬಹಳ ಕಡಿಮೆಯಿರುತ್ತದೆ. ಏಕೆಂದರೆ, ನಾವು ಯಾತ್ರೆ ಹೋಗುವ ಮಾರ್ಗದಲ್ಲಿ ಮರಗಳಿರುವುದಿಲ್ಲ, ಹಾಗಾಗಿ, ಆ ಪ್ರದೇಶಗಳಲ್ಲಿ ಉಸಿರಾಟಕ್ಕೆ ತೊಂದರೆಯಾಗುವ ಸಂಭವವುಂಟು. ಅದಕ್ಕೋಸ್ಕರ, ಅಲ್ಲಿಗೆ ಯಾತ್ರೆಗೆ ಹೋಗುವವರು ಆರೋಗ್ಯವಂತರಾಗಿ, ಧೃಡಕಾಯರಾಗಿರಬೇಕು.

ನಮ್ಮ ಯಾತ್ರೆಯು ದಿನಾಂಕ 27-6-09ರಂದು ಶುರುವಾಗಿ 16-7-09ರಂದು ಮುಕ್ತಾಯವಾಯಿತು. ಅದರಲ್ಲಿ ಮೊದಲ ಹದಿನಾರು ದಿವಸ ಕೈಲಾಸ ಪರ್ವತ ಯಾತ್ರೆ, ಉಳಿದ ನಾಲ್ಕು ದಿವಸ ಅಂದರೆ, 12-7-09ರಿಂದ 16-7-09 ರವರೆಗೆ ನೇಪಾಳದಲ್ಲಿ ಯಾತ್ರೆ.

ತಾ॥ 27-6-09ರಂದು ಬೆಳಿಗ್ಗೆ ಏಳು ಗಂಟೆಗೆ ಬೆಂಗಳೂರು ವಿಮಾನ ನಿಲ್ದಾಣದಿಂದ ನೇಪಾಳ್ ಏರ್‌ಲೈನ್ಸ್‌ನಲ್ಲಿ ದೆಹಲಿಗೆ ಪ್ರಯಾಣ ಮಾಡಿದೆವು. ಎರಡು ಗಂಟೆ ನಲ್ವತ್ತು ನಿಮಿಷ ಪ್ರಯಾಣ ಮಾಡಿ, ದೆಹಲಿಯನ್ನು ತಲುಪಿದೆವು. ಮುಂದಿನ ವಿಮಾನದಲ್ಲಿ ನೇಪಾಳದ ರಾಜಧಾನಿಯಾದ ಕಠ್ಮಂಡುವಿಗೆ ಪ್ರಯಾಣ ಮಾಡಿ, ಸಂಜೆ ನಾಲ್ಕು ಗಂಟೆಗೆ ಅಲ್ಲಿ ತಲುಪಿ, ಹೋಟೆಲ್‌ನಲ್ಲಿ ವಿಶ್ರಾಂತಿ ಪಡೆದೆವು.

ದಿನಾಂಕ 28-6-09 ರಂದು ಬೆಳಿಗ್ಗೆ ನೇಪಾಳದ ಜಗತ್ ಪ್ರಸಿದ್ಧವಾದ ಹಾಗೂ ಪುಣ್ಯ ಕ್ಷೇತ್ರವಾದ ಪಶುಪತಿನಾಥ ದೇವಸ್ಥಾನಕ್ಕೆ ಭೇಟಿ ನೀಡಿ, ನಂತರ, ಕಠ್ಮಂಡುವಿನಲ್ಲೇ ಕೆಲವು ಪ್ರೇಕ್ಷಣಿಯ ಸ್ಥಳಗಳನ್ನು ನೋಡಿದೆವು.

ಹಿಮಾಲಯದಂತಹ ಎತ್ತರವಾದ ಪ್ರದೇಶಕ್ಕೆ ಪ್ರಯಾಣ ಮಾಡುವಾಗ, ಅಲ್ಲಿ ಆಕ್ಸಿಜನ್ ಕಡಿಮೆಯಿರುವುದರಿಂದ ಒಂದೇ ಸಮನೆ ಪ್ರಯಾಣ ಮಾಡುವುದು ಸಹ ಆರೋಗ್ಯದ ದೃಷ್ಟಿಯಿಂದ ಸೂಕ್ತವಲ್ಲ. ಸ್ವಲ್ಪ ಸ್ವಲ್ಪವಾಗಿ ಎತ್ತರವನ್ನು ಕ್ರಮಿಸಿ, ನಮ್ಮ ದೇಹವನ್ನು ಆ ವಾತಾವರಣಕ್ಕೆ ಹೊಂದಿಸಿಕೊಂಡು ಪ್ರಯಾಣ ಮುಂದುವರಿಸಬೇಕು. ಆದಕ್ಕಾಗಿ, ಆ ದಿವಸ ಸಾಯಂಕಾಲದ ನಂತರ ಕಠ್ಮಂಡುವಿಗೆ ಹತ್ತಿರದಲ್ಲಿರುವ ಒಂದು ಹಿಲ್‌ಸ್ಟೇಷನ್ 'ಧುಲೆಕಲ್'ಗೆ ಬಸ್ಸಿನಲ್ಲಿ ಪ್ರಯಾಣ ಮಾಡಿ, ಅಲ್ಲೇ ರಾತ್ರಿಯನ್ನು ಕಳೆದು, ಬೆಳಿಗ್ಗೆ ಉಪಹಾರದ ನಂತರ ಕಠ್ಮಂಡುವಿಗೆ ವಾಪಸ್ಸಾದೆವು. ಆ ದಿವಸ ಅದೇ ಬಸ್ಸಿನಲ್ಲಿ ನಮ್ಮ ಪ್ರಯಾಣವನ್ನು ಮುಂದುವರಿಸಿದೆವು. ಸಾಯಂಕಾಲದ ಹೊತ್ತಿಗೆ ನೇಪಾಳದ್ದೇ ಒಂದು ಊರಾದ ಕೊಡಾರಿಗೆ ತಲುಪಿ, ಅಲ್ಲಿ ವಿಶ್ರಾಂತಿ ಪಡೆದೆವು.

## ಚೀನಾ ಮೂಲಕ ಪ್ರವೇಶ

ಮಾರನೆಯ ದಿವಸ ತಾ॥ 29-6-09ರಂದು ನೇಪಾಳದಿಂದ ಚೀನಾದೇಶಕ್ಕೆ ಪ್ರವೇಶ ಪಡೆದು, ಮಾನಸ ಸರೋವರದ ಕಡೆಗೆ ಪ್ರಯಾಣ ಮುಂದುವರಿಸಬೇಕಿತ್ತು. ದೆಹಲಿಯಲ್ಲಿದ್ದಾಗಲೇ ನಮ್ಮ ಯಾತ್ರಾ ವ್ಯವಸ್ಥಾಪಕರು ಚೀನಾ ರಾಯಭಾರಿ ಕಛೇರಿಯಿಂದ ನಮ್ಮ ವೀಸಾಗಳನ್ನು ಪಡೆದುಕೊಳ್ಳಬೇಕಿತ್ತು. ಆದರೆ, ಪ್ರಮಾದವಶಾತ್ ವೀಸಾಗಳನ್ನು ಪಡೆದುಕೊಂಡಿರಲಿಲ್ಲ, ಹಾಗಾಗಿ, ಕೊಡಾರಿಯಲ್ಲಿ ಮತ್ತೊಂದು ದಿವಸ ಉಳಿದುಕೊಳ್ಳಬೇಕಾಯಿತು. ಇದರಿಂದ ಒಳ್ಳೆಯದೇ ಆಯಿತು. ಎತ್ತರವಾದ ಆ ಪ್ರದೇಶದಲ್ಲಿ ಮತ್ತೊಂದು ದಿವಸ ಕಳೆದು, ನಮ್ಮನ್ನು ಅಲ್ಲಿಯ ವಾತಾವರಣಕ್ಕೆ ಹೊಂದಿಸಿಕೊಂಡಂತಾಯಿತು. ನೇಪಾಳದ ಕಠ್ಮಂಡುವಿನಿಂದ ಚೀನಾದ ಗಡಿಯಲ್ಲಿರುವ ಫ್ರೆಂಡ್‌ಷಿಪ್ ಸೇತುವೆಗೆ ಸುಮಾರು 120 ಕಿ.ಮೀ. ದೂರವಾಗುತ್ತದೆ. ಮಾರನೆಯ ದಿವಸ ತಾ॥ 1-7-09ರಂದು ಬೆಳಿಗ್ಗೆಯೇ ಕೊಡಾರಿಯಿಂದ ಹೊರಟು ಚೀನಾದೇಶದ ಗಡಿಯ ಊರಾದ ಜಾಂಗ್ಮುವನ್ನು ತಲುಪಿದೆವು. ಈ ಊರು ನೇಪಾಳದ ಗಡಿಗೆ ಹೊಂದಿಕೊಂಡಂತಿದೆ. ಅಲ್ಲಿರುವ ಫ್ರೆಂಡ್ ಷಿಪ್ ಸೇತುವೆಯನ್ನು ದಾಟಿ ಚೀನಾವನ್ನು ಪ್ರವೇಶಿಸಿದೆವು. ಅಲ್ಲಿನ ಕಛೇರಿಯ ಅಧಿಕಾರಿಗಳು ನಮ್ಮ ವೀಸಾ ಪತ್ರಗಳನ್ನು ಪರೀಕ್ಷಿಸಿ, ನಮ್ಮ ಪ್ರಯಾಣವನ್ನು ಮುಂದುವರಿಸಲು ಅನುಮತಿ ನೀಡಿದರು. ಜಾಂಗ್ಮು ಟಿಬೇಟಿನ ಒಂದು ಪ್ರಾಂತ್ಯ. ಆದರೆ, ಈಗ ಪೂರ್ಣ ಟಿಬೆಟ್ ಚೀನಾದವರ ಅಧೀನದಲ್ಲಿದೆ.

ಅಲ್ಲಿಂದ ಮುಂದೆ ನಮ್ಮ ಪ್ರಯಾಣವು ಫೋರ್‌ವೀಲ್ ಡ್ರೈವ್ ಇರುವ ಜೀಪ್‌ಗಳಲ್ಲಿ ಮುಂದುವರಿಯುತ್ತದೆ. ಜಾಂಗ್ಮುವಿನಲ್ಲಿ ಜೀಪ್‌ಗಳ ವ್ಯವಸ್ಥೆಯಾಗಿತ್ತು. ನಾವು ಒಟ್ಟು ನಲವತ್ತನಾಲ್ಕು ಯಾತ್ರಿಕರು. ಒಂದೊಂದು ವಾಹನದಲ್ಲಿ ನಾಲ್ಕು ಮಂದಿ ಆರಾಮವಾಗಿ ಕುಳಿತು ಪ್ರಯಾಣಿಸಬಹುದು. ಇಷ್ಟೆಲ್ಲ ತಯಾರಾಗುವಷ್ಟರಲ್ಲಿ ಸುಮಾರು ಬೆಳಗಿನ ಹನ್ನೊಂದು ಗಂಟೆಯಾಗಿತ್ತು. ಜಾಂಗ್ಮುವು ಒಂದು ಸಣ್ಣ ವ್ಯಾಪಾರ ಸ್ಥಳ. ನಾವು ಮುಂದೆ ಪ್ರಯಾಣಿಸಿ, ತಂಗಬೇಕಾದ ಸ್ಥಳವಾದ ನ್ಯಾಲಂಗೆ ಹೋಗುವ ದಾರಿಯಲ್ಲಿ ರಸ್ತೆ ದುರಸ್ತಿ ಕೆಲಸ ನಡೆಯುತಿತ್ತು. ಹಾಗಾಗಿ, ನಾವು ನ್ಯಾಲಂಗೆ ಹೊರಡಬೇಕಾದರೆ, ಸಂಜೆಯಾಗಿತ್ತು. ಆ ಮುಸ್ಸಂಜೆಯಲ್ಲೇ ಪ್ರಯಾಣ ಮಾಡಿದೆವು. ಆ

ರಾತ್ರಿಯಲ್ಲಿ ನ್ಯಾಲಂ ತಲುಪಿದೆವು. ನಮ್ಮ ಜೊತೆಯಲ್ಲೇ ಲಾರಿಯಲ್ಲಿ ಪದಾರ್ಥಗಳ ಸಮೇತ ಅಡಿಗೆಯವರು ಬಂದರು. ಊಟವಾದ ನಂತರ, ವಿಶ್ರಾಂತಿ ಪಡೆದೆವು.

## ಪ್ರಯಾಣದ ವಿವಿಧ ಹಂತಗಳು

ಮೂರನೆಯ ದಿವಸ ತಾ|| 2-7-09 ರಂದು 'ಸಾಗ' ಕಡೆಗೆ ಪ್ರಯಾಣಿಸಿದೆವು. 'ಲಾಲುಂಗಲಾ' ಕಣಿವೆಯ ಮೂಲಕ ಈ ಪ್ರಯಾಣ ಸಾಗುತ್ತದೆ. ದಾರಿಯಲ್ಲಿ ಯಾವುದೇ ಮರಗಳಿಲ್ಲ. ಅಲ್ಲಲ್ಲೆ ಕುರುಚಲು ಗಿಡಗಳು ಕಾಣಿಸುತ್ತವೆ. ಟಿಬೆಟಿಯನ್ನರು ವಾಸಿಸುವ ಕೆಲವು ಊರುಗಳು ಸಿಗುತ್ತವೆ. ಬರೇ ಮರಳುಗಾಡು. ಒಂದೊಂದು ಸಾರಿ ಬಹಳ ದಟ್ಟವಾಗಿ ಗಾಳಿ ಬೀಸಿ ಮರಳನ್ನು ಹೊತ್ತು ತರುತ್ತದೆ. ಪ್ರಯಾಣ ಮಾಡಲು ಗುರುತಿರುವ ರಸ್ತೆ ಎನ್ನುವುದು ಯಾವುದು ಇಲ್ಲ. ಜೀಪ್ ಚಾಲಕರು ಅವರ ಅನುಭವದಿಂದ ಹಾಗೂ ಕಂಪಾಸ್ ಉಪಯೋಗಿಸಿ ಮರಳು ಕಲ್ಲುಗಳಿಂದ ಕೂಡಿರುವ ರಸ್ತೆಯಲ್ಲಿ ತಮ್ಮ ಗುರಿಯೆಡೆಗೆ ಜೀಪ್‌ಗಳನ್ನು ಓಡಿಸುತ್ತಾರೆ. ಈಗ್ಗೆ ನಾಲ್ಕಾರು ವರ್ಷಗಳ ಹಿಂದೆ, ಈ ದಾರಿಯಲ್ಲಿ ಸಿಗುವ ಬ್ರಹ್ಮಪುತ್ರ ನದಿಯನ್ನು ತೆಪ್ಪದ ಮೂಲಕ ದಾಟಬೇಕಿತ್ತು. ಆದರೆ, ಈಗ ಸೇತುವೆಯನ್ನು ನಿರ್ಮಿಸಿ ರಸ್ತೆಯನ್ನು ಮಾಡಿದ್ದಾರೆ. ನ್ಯಾಲಂನಿಂದ 'ಸಾಗ'ಕ್ಕೆ ದೂರ 220 ಕಿ.ಮೀ. ಅಂದು ಅಲ್ಲೆ ಉಳಿದುಕೊಳ್ಳಲು ಎಲ್ಲಾ ವ್ಯವಸ್ಥೆ ಮಾಡಿರಲಾಗಿ ಅಲ್ಲೇ ಉಳಿದುಕೊಂಡೆವು.

ಮೂರನೆಯ ದಿವಸ ತಾ|| 3-7-09 ರಂದು 'ಪರ್ಯಾಂಗ್' ಕಡೆಗೆ ಪ್ರಯಾಣಿಸುತ್ತೇವೆ. ಈ ರಸ್ತೆಯ ದೂರ 235 ಕಿ.ಮಿ.ಗಳು. ಪರ್ಯಾಂಗ್‌ನಲ್ಲಿ ವಿಶ್ರಾಂತಿ ಪಡೆದು ತಾ|| 4-7-09 ರಂದು ಮಾನಸ ಸರೋವರಕ್ಕೆ ಪ್ರಯಾಣ ಮಾಡಿದೆವು. ದೂರ 240 ಕಿ.ಮೀ. ದಾರಿಯಲ್ಲಿ ಮಯುಮ್ಲಪಾಸ್ ಮೈದಾನದಲ್ಲಿ ಪ್ರಯಾಣ ಮಾಡುವಾಗ, ಮಾನಸ ಸರೋವರವು ನಮಗೆ ಕಾಣಿಸುತ್ತದೆ. ಇದು ಸರೋವರದ ಮೊದಲ ದರ್ಶನ ಭಾಗ್ಯ.

## ಮಾನಸ ಸರೋವರ ಪರಿಕ್ರಮ

ಪುರಾಣ ಕಥೆಗಳಲ್ಲಿ ತಿಳಿಸಿರುವಂತೆ ಈ ಸರೋವರವನ್ನು ಬ್ರಹ್ಮನು ದೇವಾನು ದೇವತೆಗಳ ಸ್ನಾನಕ್ಕೋಸ್ಕರ ಸೃಷ್ಟಿ ಮಾಡಿದನೆಂದು ಪ್ರತೀತಿ. ಆದುದರಿಂದ, ಇದನ್ನು ಬ್ರಹ್ಮ ಮಾನಸ ಸರೋವರವೆಂದು ಕರೆಯುತ್ತಾರೆ. ಈ ಸರೋವರವನ್ನು ದರ್ಶನ ಮಾಡಿದಾಗ ನಮಗೆ ಬಹಳ ಉಲ್ಲಾಸವೆನಿಸಿತು. ಆ ಸ್ಥಳಕ್ಕೆ ಕೈಲಾಸ ಪರ್ವತವು ಕಾಣಿಸುತ್ತದೆ. ಸರೋವರದ ತೀರಕ್ಕೆ ಹೋಗಿ ನಾವೆಲ್ಲಾ ಸ್ನಾನ ಮಾಡಿದೆವು. ಬಹಳ ಚಳಿ ಎನ್ನಿಸುತ್ತದೆ. ಸ್ನಾನವೆಂದರೆ ಸರೋವರದ ನೀರನ್ನು ಮೈಮೇಲೆ ಸುಮ್ಮನೆ ಸುರಿದುಕೊಳ್ಳುವುದಷ್ಟೆ, ಸೋಪ್ ಹಾಕುವಂತಿಲ್ಲ . ಮಾನಸ. ಸ್ನಾನವಾದ ನಂತರ, ಜೀಪ್‌ನಲ್ಲೆ ಕುಳಿತು ಸರೋವರದ ಪರಿಕ್ರಮ ಮಾಡಿದೆವು. ಅಂದರೆ, ಸರೋವರವನ್ನು ಒಂದು ಸುತ್ತಾಕುವುದು. ಈ ಸರೋವರವು ಬಹಳ ವಿಶಾಲವಾಗಿ ಹೆಚ್ಚಿನ ವಿಸ್ತೀರ್ಣವನ್ನು ಹೊಂದಿದೆ. ಅನಂತರ, ಕೈಲಾಸ ಪರ್ವತದ ಕೆಳಗಿರುವ ಊರಾದ ದಾರ್ಚಿನ್‌ಗೆ ಪ್ರಯಾಣ ಮಾಡಿ, ವಿಶ್ರಾಂತಿ ಪಡೆದೆವು. ತಾ|| 5-7-09 ರಂದು ಕೈಲಾಸ ಪರ್ವತದ ಪರಿಕ್ರಮಕ್ಕೆ ತಯಾರಿ ನಡೆಸಿ, ದಿನಾಂಕ 6, 7 ಮತ್ತು 8, ಈ ಮೂರು ದಿವಸಗಳು ಪರ್ವತ ಪರಿಕ್ರಮವನ್ನು ಮಾಡಲಾಯಿತು.

ದಾರ್ಚಿನಿಂದ ಕೈಲಾಸ ಪರ್ವತ ಪರಿಕ್ರಮವನ್ನು ಪ್ರಾರಂಭಿಸಬೇಕು. ಪರಿಕ್ರಮವೆಂದರೆ, ಪರ್ವತದ ಒಳಗಡೆಯಿರುವ ದಾರಿಯಲ್ಲಿ ಒಂದು ಸುತ್ತಾಕುವುದು. ರಸ್ತೆ ಬಹಳ ಕೆಟ್ಟದಾಗಿರುತ್ತದೆ ಹಾಗೂ ಪ್ರಯಾಣ ಬಹಳ ಕಷ್ಟಕರವಾಗಿರುತ್ತದೆ. ಈ ಪರಿಕ್ರಮದಲ್ಲಿ ಒಟ್ಟು ಪ್ರಯಾಣಿಸಬೇಕಾದ ದೂರ 34 ಕಿ.ಮೀ.ಗಳು. ಮೊದಲನೆ ದಿವಸ ಎಂಟು, ಎರಡನೆಯ ದಿವಸ ಹದಿನೇಳು ಮತ್ತು ಮೂರನೆಯ ದಿವಸ ಒಂಬತ್ತು ಕಿ.ಮೀ.ಗಳು. ಎರಡನೇ ಮತ್ತು ಮೂರನೆಯ ದಿವಸಗಳ ಪ್ರಯಾಣ ಬಹಳ ಕಷ್ಟಕರ ಮತ್ತು ಅಪಾಯದಿಂದ ಕೂಡಿರುತ್ತದೆ. ನಾವು ಒಟ್ಟು ನಲ್ವತ್ತನಾಲ್ಕು ಯಾತ್ರಾರ್ಥಿಗಳಲ್ಲಿ ಇಪ್ಪತ್ತಾರು ಜನರು ಮಾತ್ರ ಪರಿಕ್ರಮ ಮಾಡಿದರು. ಮಿಕ್ಕವರುಗಳಿಗೆ, ಇದು ಬಹಳ ಕಷ್ಟಕರವಾಗಿರುವುದರಿಂದ, ನೀವುಗಳು ಪರಿಕ್ರಮ ಮಾಡುವುದು ಸೂಕ್ತವಲ್ಲವೆಂದು ಮಾನ್ಯ ಕಂಚಿ ರಘುರಾಮರವರು ತಿಳಿಸಿದ ಕಾರಣ, ನಾವುಗಳು ಪರಿಕ್ರಮ ಮಾಡಲಿಲ್ಲ.

ದಿನಾಂಕ 6-7-09 ರಂದು, ನಾವೆಲ್ಲ ಪರ್ವತದ ಬುಡದ ತನಕ ಅಂದರೆ, ಯಾವ ಸ್ಥಳದಿಂದ ಪರಿಕ್ರಮ ಶುರುವಾಗುತ್ತದೆಯೊ ಅಲ್ಲಿಯತನಕ ಹೋಗಿದ್ದೆವು. ಕುದುರೆಯ ಮೇಲೆ ಅಥವಾ ನಡೆದು ಪರಿಕ್ರಮ ಮಾಡಬಹುದು. ಶುರುವಿನಲ್ಲಿ ಅಲ್ಲಿರುವ ಯಮದ್ವಾರದ ಮೂಲಕ ಹಾದು ಪರಿಕ್ರಮವನ್ನು ಪ್ರಾರಂಭಿಸಬೇಕು. ಆ ಜಾಗದಲ್ಲಿ ನಾವೆಲ್ಲ ಸ್ವಲ್ಪ ಸಮಯ ಕುಳಿತು ಧ್ಯಾನ ಮಾಡಿ, ಪರಿಕ್ರಮಕ್ಕೆ ಹೋಗಿರುವವರೆಲ್ಲ ಯಾವುದೇ ತೊಂದರೆಗೊಳಗಾಗದೆ ಸುಖವಾಗಿ ಹಿಂತಿರುಗುವಂತೆ ಅವರಿಗೆಲ್ಲ ಶುಭ ಕೋರಿ, ದಾರ್ಚಿನ್‌ಗೆ ಹಿಂದಿರುಗಿದೆವು.

## ಕೈಲಾಸ ಪರ್ವತ ದರ್ಶನ

ದಿನಾಂಕ 7-7-09 ರಂದು ಬೆಳಿಗ್ಗೆ ಕೈಲಾಸ ಪರ್ವತವನ್ನು ಆದಷ್ಟು ಹತ್ತಿರದಿಂದ ನೋಡಬೇಕೆಂಬ ಅಭಿಲಾಷೆಯಿಂದ, ಜೀಪ್‌ನಲ್ಲಿ ಸ್ವಲ್ಪ ದೂರ ಪ್ರಯಾಣಮಾಡಿ, ಅಷ್ಟಪದಿ ಎಂಬ ಬೆಟ್ಟದ ಬುಡವನ್ನು

ತಲುಪಿ, ಅಲ್ಲಿಂದ ನಡೆದುಕೊಂಡೋಗಿ ಬೆಟ್ಟವನ್ನು ಏರಿಕುಳಿತು, ನಮ್ಮಲ್ಲಿದ್ದ ದುರ್ಬಿನ್ ಮೂಲಕ ಕೈಲಾಸ ಪರ್ವತವನ್ನು ನೋಡಿದೆವು. ಆಗ, ನಮಗಾದ ಆನಂದವನ್ನು ವರ್ಣಿಸಲಸಾಧ್ಯ. ನನ್ನಲ್ಲಿ ಹಿಮಾಲಯ ಪರ್ವತವನ್ನು ಸಂದರ್ಶಿಸಿದ ಸಂತೃಪ್ತಿಯ ಭಾವ ತುಂಬಿ ತುಳುಕಾಡುತಿತ್ತು. ಎಲ್ಲಿಯ ಮೈಸೂರು, ಎಲ್ಲಿಯ ಕೈಲಾಸಪರ್ವತ - ಎತ್ತಣಿತ್ತ ಸಂಬಂಧವಯ್ಯ ಎನ್ನಿಸಿತು.

ತಾ|| 8-7-09 ರಂದು ನಮಗೆ ಬೇರೇನು ಕೆಲಸವಿಲ್ಲದಿದ್ದುದರಿಂದ, ಮತ್ತೊಮ್ಮೆ ಮಾನಸ ಸರೋವರದಲ್ಲಿ ಸ್ನಾನ ಮಾಡಬೇಕೆಂಬ ಅಭಿಲಾಷೆಯಿಂದ ಸರೋವರದ ಹತ್ತಿರ ಹೋದೆವು. ನಮ್ಮ ಅದೃಷ್ಟಕ್ಕೆ ಯಾತ್ರೆಗೆ ಬಂದಿದ್ದವರ ಸಹಾಯಕರು ಬಿಸಿ ನೀರನ್ನು ಕಾಯಿಸಿ ಸ್ನಾನ ಮಾಡಿದರು ಹಾಗೂ ನಮಗೂ ಸ್ನಾನ ಮಾಡಲು ನೀರು ಕೊಟ್ಟರು.

ಮಧ್ಯಾಹ್ನದ ಹೊತ್ತಿಗೆ ಪರಿಕ್ರಮಕ್ಕೆ ಹೋಗಿದ್ದವರು ಒಟ್ಟೊಟ್ಟಾಗಿ ವಾಪಸ್ಸಾದರು. ಎಲ್ಲರೂ ವಾಪಸ್ಸಾದ ನಂತರ, ಊಟವನ್ನು ಮುಗಿಸಿಕೊಂಡು, ಸರೋವರದ ಮತ್ತೊಂದು ಭಾಗಕ್ಕೆ ಪ್ರಯಾಣ ಮಾಡಿ, ಅಲ್ಲಿ ತಯಾರಿಸಿದ್ದ ಗುಡಾರಗಳಲ್ಲಿ ಉಳಿದುಕೊಂಡೆವು. ಅಂದು ಗುರು ಪೌರ್ಣಿಮೆಯಾಗಿರಲಾಗಿ, ಧ್ಯಾನ ಮಾಡಲು ಮತ್ತು ಯಾತ್ರಾ ಸ್ಥಳಗಳಲ್ಲಿ ಸ್ನಾನ ಮಾಡಲು ಬಹಳ ಪವಿತ್ರವಾದ ದಿವಸ. ಹಾಗಾಗಿ, ನಾವು ಮಾನಸ ಸರೋವರದಲ್ಲಿ ಮತ್ತೊಮ್ಮೆ ಸ್ನಾನ ಮಾಡಿ, ಕ್ಯಾನ್‌ಗಳಲ್ಲಿ ಸರೋವರದ ನೀರನ್ನು (ತೀರ್ಥವನ್ನು) ತುಂಬಿಕೊಂಡು ಗುಡಾರಕ್ಕೆ ಹಿಂತಿರುಗಿದೆವು. ರಾತ್ರಿ ಅಲ್ಲೇ ಮಲಗುವ ವ್ಯವಸ್ಥೆಯಾಗಿತ್ತು. ರಾತ್ರಿಯ ಹೊತ್ತು ದೇವತೆಗಳು ಸ್ನಾನ ಮಾಡಲು ನಕ್ಷತ್ರ ರೂಪದಲ್ಲಿ ಮಾನಸ ಸರೋವರಕ್ಕೆ ಬರುತ್ತಾರೆಂಬ ಪ್ರತೀತಿಯಿದೆ. ಆದುದರಿಂದ, ನಕ್ಷತ್ರಗಳು ಸರೋವರಕ್ಕೆ ಬೀಳುವುದನ್ನು ನೋಡಲು ರಾತ್ರಿಯ ಅಂಥ ಚಳಿಯಲ್ಲೂ ಯಾತ್ರಾರ್ಥಿಗಳು ಕಾದು ಕುಳಿತ್ತಿರುತ್ತಾರೆ. ನಮ್ಮ ಜೊತೆಯಲ್ಲಿ ಬಂದಿದ್ದವರು ಸಹ ಕಾದು ಕುಳಿತು, ಒಂದೆರಡು ನಕ್ಷತ್ರಗಳು ಬೀಳುವುದನ್ನು ಸಹ ನೋಡಿದೆವು ಎಂದು ತಿಳಿಸಿದರು.

### ಕಠ್ಮಂಡುಗೆ ವಾಪಸ್ ಪ್ರಯಾಣ

ಮಾರನೆಯ ದಿವಸ 9-7-09 ರಂದು ಬೆಳಿಗ್ಗೆ ಬೇಗ ಎದ್ದು, ಕಠ್ಮಂಡುವಿಗೆ ವಾಪಸ್ಸಾಗಲು ತಯಾರಾದೆವು. ಆ ದಿವಸ ಬಹಳ ದೂರ ಸುದೀರ್ಘವಾದ ಪ್ರಯಾಣ ಮಾಡಬೇಕಾದುದರಿಂದ, ಕೂಡಲೇ, ಅಲ್ಲಿಂದ ಹೊರಟೆವು. ಆ ದಿವಸ ರಾತ್ರಿ 'ಸಾಗ'ವನ್ನು ತಲುಪಿ ವಿಶ್ರಾಂತಿ ಪಡೆದೆವು.

ಮಾರನೆಯ ದಿವಸ ನ್ಯಾಲಂ ಕಡೆಗೆ ಪ್ರಯಾಣಿಸುವ, ದಾರಿಯಲ್ಲಿ ಟಿಬೇಟ್‌ನ ಯೋಗಿ 'ಮಿಲೇರಪ್ಪ' ಎನ್ನುವವರ ಗುಹೆಯನ್ನು ನೋಡಿಕೊಂಡು 'ನ್ಯಾಲಂ'ಅನ್ನು ತಲುಪಿದೆವು. ಬಹಳ ಬಹಳ ಹಿಂದೆ ಮಿಲೇರಪ್ಪನವರು ಈ ಗುಹೆಯಲ್ಲಿ ತಪಸ್ಸು ಮಾಡುತ್ತಿದ್ದರು ಎನ್ನುವ ಬಗ್ಗೆ ಕಥೆಯಿದೆ. ಈ ಗುಹೆಗೆ ಮುಖ್ಯ ರಸ್ತೆಯಿಂದ ಕೆಳಮುಖವಾಗಿ ಸಾಗುವ ದಾರಿಯಲ್ಲಿ ನಡೆದು ಹೋಗಬೇಕು.

ತಾ|| 11-7-09 ರಂದು ಬೆಳಿಗ್ಗೆ ಬೇಗ ಹೊರಟು, ಜಾಂಗ್ಮುವನ್ನು ತಲುಪಿ, ಫ್ರೆಂಡ್‌ಷಿಪ್ ಸೇತುವೆಯನ್ನು ದಾಟಿ ಕಠ್ಮಂಡುವನ್ನು ಆದಷ್ಟು ಬೇಗನೆ ತಲುಪಬೇಕೆಂಬ ಅಭಿಪ್ರಾಯ ನಮಗಿತ್ತು. ಆದರೆ, ಸೇತುವೆಯ ತನಕ ಜೀಪ್‌ಗಳಲ್ಲಿ ಪ್ರಯಾಣಿಸಲು ಸಾಧ್ಯವಾಗಲಿಲ್ಲ, ನಮ್ಮ ನಮ್ಮ ಪದಾರ್ಥಗಳನ್ನು ತೆಗೆದುಕೊಂಡು ಸೇತುವೆಯ ತನಕ ನಡೆದುಕೊಂಡೇ ಹೋದೆವು. ಅಲ್ಲಿ ಚೀನಾ ಇಮಿಗ್ರೇಷನ್ ಅಧಿಕಾರಿಗಳಿಗೆ, ಸಂಬಂಧಪಟ್ಟ ಪತ್ರಗಳನೆಲ್ಲ ತೋರಿಸಿ, ಅವರಿಂದ ಅನುಮತಿ ದೊರತ ನಂತರ, ನೇಪಾಳದ ಗಡಿಯನ್ನು ಪ್ರವೇಶಿಸಿದೆವು. ನಾವು ಮುಂದೆ 'ಕಠ್ಮಂಡು'ವಿಗೆ ಪ್ರಯಾಣಿಸಬೇಕಿತ್ತು. ನಮ್ಮ ಹಿಂದೆ ಲಾರಿಯಲ್ಲಿ ಉಳಿದ ನಮ್ಮ ಸಾಮಾನು ಸರಂಜಾಮುಗಳು ಬರುತ್ತಿದ್ದವು. ಆದರೆ, ರಸ್ತೆ ಮುಚ್ಚೋಗಿರುವುದರಿಂದ ಲಾರಿ ಬರುವುದು ತಡವಾಗಬಹುದೆನ್ನಿಸಿ, ನಾವು ಅಲ್ಲಿಂದ ಬಸ್ಸಿನಲ್ಲಿ ಪ್ರಯಾಣ ಮಾಡಿ ಕಠ್ಮಂಡುವಿನಲ್ಲಿ ಹೋಟೆಲ್ ತಲುಪಿದೆವು. ಈ ದಾರಿ ಸುಮಾರು 120 ಕಿ.ಮೀ. ಆಗುತ್ತದೆ. ಇದು ಬಹಳ ತಿರುವುಗಳಿಂದ ಕೂಡಿದೆ. ಆಹ್ಲಾದಕರವಾದ ಪ್ರಯಾಣ. ಕಠ್ಮಂಡುವನ್ನು ಸಂಜೆಯಹೊತ್ತಿಗೆ ತಲುಪಿದೆವು.

### ನೇಪಾಳ ಪ್ರವಾಸ

ಮಾರನೆಯ ದಿವಸ ತಾ|| 12-7-09 ರಂದು ನಮ್ಮ ನೇಪಾಳದ ಯಾತ್ರೆ ಶುರುವಾಗುತ್ತದೆ. ಆ ದಿವಸ ಬೆಳಿಗ್ಗೆಯೇ ಕಠ್ಮಂಡು ವಿಮಾನ ನಿಲ್ದಾಣದಿಂದ ನೇಪಾಳದ ಮತ್ತೊಂದು ವಿಮಾನ ನಿಲ್ದಾಣವಾದ 'ಭೈರವ'ಕ್ಕೆ ಪ್ರಯಾಣ ಮಾಡಿ, ವಿಮಾನ ನಿಲ್ದಾಣದಲ್ಲಿ ಇಳಿದು, ಮುಂದಿನ ಪ್ರಯಾಣವನ್ನು ಬಸ್ಸಿನಲ್ಲಿ ಮಾಡಿದೆವು. ನಾವು ಸಾಗುವ ದಾರಿಯಲ್ಲಿ 'ಲುಂಬಿನಿ' ಎಂಬ ಊರು ಸಿಗುತ್ತದೆ. ಈ ಊರೇ ಭಗವಾನ್ 'ಬುದ್ಧ'ನ ಜನ್ಮಸ್ಥಳ. ಆ ಜಾಗವನ್ನು ಸಂಪೂರ್ಣವಾಗಿ ನೋಡಿಕೊಂಡು, ನಮ್ಮ ಪ್ರಯಾಣವನ್ನು ಮುಂದುವರಿಸಿದೆವು. ನಾವು ಮುಂದೆ ತಲುಪಬೇಕಾದ ಸ್ಥಳ 'ಪೋಕ್ರಂ ಎಂಬ ನೇಪಾಳದ ಮತ್ತೊಂದು ನಗರ.

ಹಾಗಾಗಿ, ಅದೇ ಬಸ್ಸಿನಲ್ಲಿ ನಮ್ಮ ಪ್ರಯಾಣವನ್ನು ಮುದುವರಿಸಿದೆವು. ಬೆಳಗಿನ ಜಾವ 'ಪೋಕ್ರಂ' ತಲುಪಿದೆವು. ಈಗಾಗಲೇ ಅಲ್ಲಿ ನಮ್ಮವರು ನಿಗದಿಪಡಿಸಿದ್ದ ಹೋಟಲನ್ನು ತಲುಪಿ ವಿಶ್ರಮಿಸಿದೆವು.

ಮಾರನೆಯ ದಿವಸ ತಾ॥ 13-7-09 ರಂದು ಬೆಳಿಗ್ಗೆಯೇ ನೇಪಾಳದಲ್ಲಿರುವ ಮುಕ್ತಿನಾಥ ಮಂದಿರವನ್ನು ದರ್ಶನ ಮಾಡುವುದು ನಮ್ಮ ಕಾರ್ಯಕ್ರಮವಾಗಿತ್ತು. ಇದು ನೇಪಾಳದ 'ಜಾಂಸನ್' ಎಂಬ ನಗರದಿಂದ ಸುಮಾರು ದೂರದಲ್ಲಿದೆ. ಆದುದರಿಂದ, ಬೆಳಿಗ್ಗೆ ಎದ್ದ ಕೂಡಲೇ ವಿಮಾನದಲ್ಲಿ ಜಾಂಸನ್‌ಗೆ ಪ್ರಯಾಣ ಮಾಡಬೇಕಿತ್ತು. ನಮ್ಮ ತಂಡದ ಅರ್ಧದಷ್ಟು ಜನರು ಬೆಳಿಗ್ಗೆ ಬೇಗ ಎದ್ದು, ತಯಾರಾಗಿ ವಿಮಾನದಲ್ಲಿ ಜಾಂಸನ್‌ಗೆ ಪ್ರಯಾಣ ಮಾಡಿದರು. ಪೋಕ್ರಂನಲ್ಲಿ ವಿಮಾನ ನಿಲ್ದಾಣವು ನಾವು ಉಳಿದಿದ್ದ ಹೋಟೆಲ್‌ಗೆ ಬಹಳ ಹತ್ತಿರದಲ್ಲಿರಲಾಗಿ ಉಳಿದವರು ತಯಾರಾಗುವುದರಲ್ಲಿ ವಿಮಾನ ಹಾರಾಟವನ್ನು ನಿಲ್ಲಿಸಲಾಗಿದೆ ಎಂಬ ಸುದ್ದಿ ತಿಳಿಯಿತು. ಆ ದಿವಸ ಪೂರ್ತಿ, ರದ್ದಾಗಿದ್ದ ವಿಮಾನ ಹಾರಾಟವು ಮತ್ತೆ ಶುರುವಾಗಲಿಲ್ಲ, ಆದರೂ, ಉಳಿದವರು ವಿಮಾನ ನಿಲ್ದಾಣಕ್ಕೆ ಹೋಗಿ ವಾಪಸ್ಸಾದೆವು. ನೇಪಾಳದಲ್ಲಿ ವಿಮಾನ ಹಾರಾಟವು ಆ ದಿವಸದ ವಾತಾವರಣದ ಪರಿಸ್ಥಿತಿಯನ್ನು ಅವಲಂಬಿಸಿರುತ್ತದೆ. ಆ ದಿವಸ ಪೂರ್ತಿ ವಾತಾವರಣವು ಮೋಡ ಮತ್ತು ಮಂಜಿನಿಂದ ಕೂಡಿ ಸರಿಯಿಲ್ಲದಿದ್ದುದರಿಂದ, ವಿಮಾನ ಹಾರಾಟವನ್ನು ಮತ್ತೆ ಶುರುಮಾಡಿಲ್ಲ. ಜಾಂಸಂನನ್ನು ತಲುಪಿದ್ದವರು ಮುಕ್ತಿನಾಥ ಮಂದಿರಕ್ಕೆ ಹೋಗಿ, ಭಗವಂತನ ದರ್ಶನ ಪಡೆಯಲು, ಅವರ ಪ್ರಯಾಣವನ್ನು ಮುಂದುವರಿಸಿದರು. ವಿಮಾನ ನಿಲ್ದಾಣದಿಂದ ಸ್ವಲ್ಪ ದೂರ ನಡೆದು ಹೋಗಿ, ನಂತರ, ಅಲ್ಲಿಂದ ಮುಂದಕ್ಕೆ ಜಟಕಾ ಗಾಡಿಯಲ್ಲಿ ಪ್ರಯಾಣಿಸಬೇಕು. ಮುಕ್ಕಾಲು ದೂರ ಕ್ರಮಿಸದ ನಂತರ, ರಸ್ತೆ ಕಡಿದಾಗಿರುವುದರಿಂದ ಮೋಟಾರ್ ಬೈಕ್‌ನಲ್ಲಿ ಸವಾರನ ಜೊತೆಯಲ್ಲಿ ಒಟ್ಟೊಟ್ಟಿಗೆ ಕುಳಿತು ಮಂದಿರವನ್ನು ತಲುಪಬೇಕು. ಅದರಲ್ಲೂ ಸ್ವಲ್ಪ ದೂರ ಪ್ರಯಾಣಿಸಿ, ಇಳಿದು ಸ್ವಲ್ಪ ದೂರ ನಡೆದು, ಮತ್ತೊಬ್ಬ ಸವಾರನ ಜೊತೆಯಲ್ಲಿ ಮಂದಿರವನ್ನು ತಲುಪಬೇಕು. ಹಿಂತಿರುಗುವಾಗಲು ಅದೇ ರೀತಿಯಲ್ಲಿ ಸವಾರನ ಜೊತೆಯಲ್ಲಿ ವಾಪಸ್ಸಾಗಬೇಕು. ಮಂದಿರವನ್ನು ತಲುಪಿದ ನಂತರ, ಅದರ ಹಿಂಭಾಗದಲ್ಲಿ ಗೋಮುಖದಂತಿರುವ ನೂರೆಂಟು ನಲ್ಲಿಗಳಲ್ಲಿ ಮಂಜಿನಂತೆ ಕೊರೆಯುವ ನೀರು ಬರುತ್ತಿರುತ್ತದೆ. ಇದಾದ ನಂತರ, ಅಲ್ಲೇ ಇರುವ ಜ್ವಾಲಮುಖಿಯೆಂಬ ಸ್ಥಳವನ್ನು ನೋಡಿದೆವು. ಜ್ವಾಲಮುಖಿಯಲ್ಲಿ ಒಂದೇ ಕಡೆ ತಣ್ಣೀರು ಮತ್ತು ಬಿಸಿ ನೀರು ಬರುತ್ತದೆ. ಇದನ್ನು ನೋಡಿ ವಾಪಸ್ಸಾದೆವು. ಅಲ್ಲಿರುವ ದೊಡ್ಡ ಕೊಳದ ಮಧ್ಯೆ ಒಂದು ದೇವಸ್ಥಾನವಿದೆ. ಅದನ್ನು ನೋಡಲು ಬೋಟ್‌ನಲ್ಲಿ ಹೋಗಬೇಕು. ನಗರದ ಮಧ್ಯಭಾಗದಲ್ಲಿ ಒಂದು ಬಹಳ ಆಳವಾದ ಗುಹೆಯಿದೆ. ಅದರಲ್ಲಿ ದೇವರ ಮೂರ್ತಿಗಳಿವೆ. ತಳದ ತನಕ ನಡೆದು, ಹೋಗಿ ಬರಲು ಮೆಟ್ಟಿಲುಗಳಿದ್ದಾವೆ. ಮೇಲ್ಗಡೆಯಿಂದ ನೀರು ಜಿನಿಸುತ್ತಿರುತ್ತದೆ. ಬಹಳ ಎಚ್ಚರದಿಂದ ಹೋಗಿಬಂದೆವು. ಇದನ್ನೆಲ್ಲಾ ನೋಡಲು ಎರಡು ದಿವಸಗಳಾಯಿತು.

ತಾ॥ 14-7-09 ರಂದು ಬೆಳಿಗ್ಗೆ ಬೇಗ ಎದ್ದು ವಿಮಾನದಲ್ಲಿ ಪೋಕ್ರಂಗೆ ತೆರಳಿ, ಅಲ್ಲಿ ವ್ಯವಸ್ಥೆಯಾಗಿದ್ದ ಬಸ್‌ಗಳಲ್ಲಿ ಕಠ್ಮಂಡುವಿಗೆ ಪ್ರಯಾಣ ಬೆಳೆಸಿದೆವು. ದಾರಿಯಲ್ಲಿ ಪ್ರಖ್ಯಾತವಾದ 'ಮನೋಕಾಮನ' ಮಂದಿರ ಸಿಗುತ್ತದೆ. ಆ ಮಂದಿರಕ್ಕೆ ಭೇಟಿ ನೀಡಿದೆವು. ಅದು ನೇಪಾಳದ ಶಕ್ತಿಪೀಠ. ಈ ಮಂದಿರವು ಬಹಳ ಎತ್ತರವಾದ ಬೆಟ್ಟದ ಮೇಲಿದೆ. ಆದುದರಿಂದ, ಮಂದಿರಕ್ಕೆ ನಡೆದು ಹೋಗಲು ಒಂದೆರಡು ದಿವಸಗಳೇ ಬೇಕಾಗುತ್ತದೆ. ಆ ಮಂದಿರಕ್ಕೆ ಭೇಟಿ ನೀಡಲು, ಎರಡು ಬೆಟ್ಟಗಳನ್ನು ಸೇರಿಸಿ ರೋಪ್ ವೇ ಮೇಲೆ ಕೇಬಲ್‌ಕಾರ್ ವ್ಯವಸ್ಥೆಯನ್ನು ಮಾಡಿದ್ದಾರೆ. ಎತ್ತರದಲ್ಲಿ ವೇಗವಾಗಿ ಸಾಗುತ್ತಿರುವ ಕೇಬಲ್‌ಕಾರಿನಲ್ಲಿನ ಪ್ರಯಾಣ ಬಹಳ ಆಹ್ಲಾದಕರವಾಗಿರುತ್ತದೆ. ಎರಡು ಕಡೆಗಳಲ್ಲೂ ಹಸಿರಿನಿಂದ ಕೂಡಿದ ಗಿಡಮರಗಳು. ಕೆಳಗೆ ಕಾಣುವ ಊರುಗಳು, ಹರಿಯುತ್ತಿರುವ ನದಿ, ಓಡಾಡುತ್ತಿರುವ ಜನರು, ಮನೆಗಳು, ಇವುಗಳನ್ನೆಲ್ಲ ನೋಡಲು ಬಹಳ ಆನಂದವಾಗುತ್ತದೆ. ದೇವಿಯ ದರ್ಶನವು ತುಂಬಾ ಚೆನ್ನಾಗಿ ಆಯಿತು. ಕೇಬಲ್‌ಕಾರ್‌ನಿಂದ ಕೆಳಗಿಳಿದು, ಬಸ್ಸಿನಲ್ಲಿ ಪ್ರಯಾಣ ಮಾಡಿ, ಕಠ್ಮಂಡು ತಲುಪಿದೆವು.

### ಬೆಂಗಳೂರಿಗೆ ವಾಪಸ್ ಪ್ರಯಾಣ

ಮಾರನೆಯ ದಿವಸ ಬೆಳಿಗ್ಗೆ ತಾ॥ 16-9-09 ರಂದು ನಾವು ವಿಮಾನ ನಿಲ್ದಾಣಕ್ಕೆ ಬಂದು, ದೆಹಲಿ ಮೂಲಕ ಬೆಂಗಳೂರಿಗೆ ವಾಪಸ್ಸಾದೆವು. ಇಲ್ಲಿಗೆ ನಮ್ಮ ಇಪ್ಪತ್ತು ದಿವಸದ ಕೈಲಾಸ ಪರ್ವತ - ಮಾನಸ ಸರೋವರ ಯಾತ್ರೆ ಮುಕ್ತಾಯವಾದಂತಾಯಿತು.

ಈ ಯಾತ್ರೆಯು ಯಾವುದೇ ತೊಂದರೆ ತಾಪತ್ರಯಗಳಿಗೆ ಒಳಗಾಗದೆ, ಬಹಳ ಸುಲಲಿತವಾಗಿ ಮುಕ್ತಾಯವಾದುದಕ್ಕೆ ನಮಗೆಲ್ಲರಿಗೂ ಬಹಳ ಆನಂದವಾಯಿತು. ಅದಕ್ಕಾಗಿ ನಮ್ಮ ಯಾತ್ರೆಯನ್ನು ವ್ಯವಸ್ಥೆಮಾಡಿದ್ದ ಮಾನ್ಯ ಕಂಚಿರಘುರಾಂರವರಿಗೂ ಹಾಗೂ ಗುರುಗಳಾದ ಪತ್ರೀಜಿಯವರಿಗೂ ಅನಂತಾನಂತ ವಂದನೆಗಳನ್ನು ಅರ್ಪಿಸುತ್ತೇವೆ.

- ಎಸ್. ಪಿ. ಇಂದ್ರಪ್ಪ ಮತ್ತು ಸುಧಾ ಇಂದ್ರಪ್ಪ
ಜಯನಗರ, ಮೈಸೂರು

# ಪಿರಮಿಡ್ ವ್ಯಾಲಿಯಲ್ಲಿ ಪತ್ರೀಜಿ



ಅಕ್ಟೋಬರ್ ತಿಂಗಳಲ್ಲಿ ಆರು ದಿವಸಗಳು ಪತ್ರೀಜಿಯವರು G.C.S.S ಗೋಸ್ಕರ ಪಿರಮಿಡ್ ವ್ಯಾಲಿಯಲ್ಲಿ ನೆಲೆಸಿದ್ದರು. ಅಕ್ಟೋಬರ್ 1ನೆಯ ತಾರೀಖು ಬೆಳಗ್ಗೆ ಪತ್ರೀಜಿಯವರು ಕರ್ನೂಲ್ ನಿಂದ ಪಿರಮಿಡ್ ವ್ಯಾಲಿಗೆ ಬಂದು ಸೇರಿದರು. G.C.S.S ಮಾಸ್ಟರ್ಸ್ ಮತ್ತು ಪ್ರತಿನಿಧಿಗಳು 1ನೇ ತಾರಿಖು ಸಾಯಂಕಾಲಕ್ಕೆ ವ್ಯಾಲಿಗೆ ಸೇರಿದರು. ಆ ದಿವಸ ಸಾಯಂಕಾಲ ಪತ್ರೀಜಿಯವರು ಸುಸಜ್ಜಿತವಾದ ಅಡುಗೆ ಕೋಣೆಯನ್ನು ಉದ್ಘಾಟಿಸಿದರು. ಅಡುಗೆ ಮನೆಯು ಯಾವ ಹೊಗೆ ಮುಂತಾದವುಗಳು ಇಲ್ಲದೆ ಇರುವಂತಹ ಸುಸಜ್ಜಿತ ಅಡುಗೆ ಕೋಣೆಯಾಗಿದೆ. ಇಲ್ಲಿ ಮಾಡುವ ಅಡುಗೆ ಮತ್ತು 75 ಕೆ.ಜಿ ಅನ್ನವನ್ನು 10 ನಿಮಿಷದಲ್ಲಿ ತಯಾರಿಸುವ ಯಂತ್ರಗಳಿವೆ. ಇಡ್ಲಿ ಮಾಡುವ ಪಾತ್ರೆಯೂ ಸಹ 240 ಇಡ್ಲಿಯನ್ನು ಕೇವಲ 8 ನಿಮಿಷಗಳಲ್ಲಿ ತಯಾರುಮಾಡುತ್ತವೆ. ಇನ್ನು ಮುಂತಾದವೂ ಈ ಸುಸಜ್ಜಿತ ಅಡುಗೆ ಕೋಣೆಯಲ್ಲಿದೆ.



ಅಕ್ಟೋಬರ್ 2ನೇ ತಾರೀಖು ಬೆಳಗ್ಗೆ 10 ಗಂಟೆಗೆ G.C.S.S ಪ್ರೋಗ್ರಾಂ ಶ್ರೀ ಪತ್ರೀಜಿಯವರ ವೇಣುವಾದನ ಜೊತೆಗೆ ಧ್ಯಾನದೊಡನೆ ಪ್ರಾರಂಭವಾಯಿತು. ಆ ದಿವಸ ಗಾಂಧೀಜಯಂತಿ ಇದ್ದುದರಿಂದ, ಅವರ ಫೋಟೋಗೆ ಹೂವಿನ ಮಾಲೆಯನ್ನು ಹಾಕಿದರು, ನಂತರ, ಪತ್ರೀಜಿಯವರು "ರಘುಪತಿ ರಾಘವ ರಾಜಾರಾಂ" ಎಂಬ ಗೀತೆಯನ್ನು ಹಾಡಿ ಎಲ್ಲರಿಂದಲೂ ಹಾಡಿಸಿದರು. ಇದಾದ ನಂತರ, ಪತ್ರೀಜಿಯವರು ಧ್ಯಾನ ವಿಜ್ಞಾನ ಮತ್ತು ಪಿರಮಿಡ್ಸ್ ಬಗ್ಗೆ G.C.S.S ಕಾರ್ಯಕ್ರಮಕ್ಕೆ ಬಂದವರೆಲ್ಲರಿಗೂ ತಿಳಿಸಿದರು. ಅದೇ ದಿವಸ ಸಾಯಂಕಾಲ ಶ್ರೀ ಶ್ರೀ ರವಿಶಂಕರ್ ಮತ್ತು ಟೈಮ್ಸ್ ಆಫ್ ಇಂಡಿಯಾ ಚೇರ್‌ಮನ್ ಇಂದು ಜೈನ್ ರವರು ಪಿರಮಿಡ್ ವ್ಯಾಲಿಗೆ ಆಗಮಿಸಿದರು.



ಪತ್ರೀಸಾರ್ ಮತ್ತು ಎಲ್ಲಾ ಪಿರಮಿಡ್ ಮಾಸ್ಟರ್‌ಗಳು ಅವರನ್ನು ಹಾರ್ದಿಕವಾಗಿ ಸ್ವಾಗತಿಸಿದರು. ಆ ದಿವಸದ ಕಾರ್ಯಕ್ರಮದಲ್ಲಿ ಶ್ರೀ ಶ್ರೀ ರವಿಶಂಕರ್ ರವರು ಎಲ್ಲರನ್ನು ಉದ್ದೇಶಿಸಿ ಮಾತನಾಡಿದರು. ಅವರು ಹೇಳುವಂತೆ ಆನಂದಮಯ ಜೀವನವನ್ನು ನಡೆಸಲು ಧ್ಯಾನ ಮತ್ತು ಸಸ್ಯಾಹಾರೀ ಜೀವನ ಕ್ರಮ ಪ್ರಮುಖವಾದದ್ದು ಎಂದರು. ಪತ್ರೀಜಿಯವರು ತಿಳಿಸುವಂತೆ ಯಾರು ಧ್ಯಾನವನ್ನು ಬಲ್ಲರೋ ಅವರಿಗೆ "ಜೀವನ ಕಲೆ"ಯ ಬಗ್ಗೆ ಚೆನ್ನಾಗಿ ಅರಿವಿರುತ್ತದೆ ಎಂದರು. ಶ್ರೀಶ್ರೀ ರವಿಶಂಕರ್‌ರವರು ನಮ್ಮ ಪಿರಮಿಡ್‌ನ್ನು ನೋಡಿ ತುಂಬಾ ಆನಂದ ಪಟ್ಟರು.

ಅಕ್ಟೋಬರ್ 3ನೇ ತಾರೀಖು ಬೆಳಗ್ಗೆ 6 ಗಂಟೆಯಿಂದ 7 ಗಂಟೆಯವರೆಗೂ ಪತ್ರೀಜಿಯವರು ಪಿರಮಿಡ್‌ನಲ್ಲಿ ಎಲ್ಲರಿಂದ ಧ್ಯಾನ ಮಾಡಿಸಿದರು. ಧ್ಯಾನದ ನಂತರ, 7 ಮೂಲ ಅನುಭವಗಳ ಬಗ್ಗೆ ತಿಳಿಸಿದರು. ನಂತರ, ಧ್ಯಾನದಿಂದ ನಮ್ಮೊಳಗೆ ಹೇಗೆ ಹೀಲಿಂಗ್ ಆಗುತ್ತದೆಯೋ ಎಂಬುದರ ಬಗ್ಗೆ ತಿಳಿಸಿದರು. ನಮ್ಮೊಳಗಿರುವ ಡಾಕ್ಟರ್‌ನ್ನು ತೋರಿಸುವ ಮೂಲಕ ನಮ್ಮ ಆಂತರಿಕ ಶಕ್ತಿಯ ಬಗ್ಗೆ ಅರಿವನ್ನು ಮೂಡಿಸಿದರು. ಆದ್ದರಿಂದ, ನಾವು ಬೇರೆಯ ಡಾಕ್ಟರ್‌ಗಳ ಬಳಿಗೆ ಹೋಗಬೇಕಾದ ಅವಶ್ಯಕತೆಯಿಲ್ಲವೆಂದು ತಿಳಿಸಿದರು. ಅದಕ್ಕೂ ಎರಡು ಉದಾಹರಣೆ ಕೊಟ್ಟರು.

1. ಮೊದಲನೆಯ ಉದಾಹರಣೆ ಪತ್ರೀಜಿಯವರು ಮತ್ತು ಅವರ ಶ್ರೀಮತಿಯವರು ಒಂದು ಬಾರಿ ಕರ್ನೂಲ್‌ನಿಂದ ಹೈದರಾಬಾದ್‌ಗೆ ಪ್ರಯಾಣ ಮಾಡುತ್ತಿದ್ದರು. ಆಗ ಅವರಿಗೆ ಒಂದು ಕಪ್ಪು ಚೇಳು ಕಚ್ಚಿ, ಅವಳ ಶರೀರವೆಲ್ಲಾ ಕೂಡಲೇ ವಿಷದಿಂದ ಕೂಡಿತು. ಅದರ ಬಾಧೆಯಿಂದ ಆಕೆ ಅಳಲು ಪ್ರಾರಂಭಿಸಿದಳು. ಪತ್ರೀಸಾರ್ ಮಾತ್ರ



ಏನೂ ಮಾತನಾಡದೇ ಸುಮ್ಮನಿದ್ದರು. ಡಾಕ್ಟರ್ ಬಳಿ ಹೋಗೋಣವೆಂದು ಹೇಳಿದಳು. ಆದರೆ ಪತ್ರೀ ಸಾರ್ "ಧ್ಯಾನ ಮಾಡು ಡಾಕ್ಟರ್ ಬೇಡ" ಎಂದರು. ಅವರು ಹೈದರಾಬಾದ್‌ಗೆ ಸೇರಿಕೊಂಡರು. ಆದರೆ ಆ ವೇಳೆಗೆ ಅವರ ಎರಡು ಕಾಲುಗಳು ಪೂರ್ತಿ ಕಪ್ಪುಬಣ್ಣದಿಂದ ಕೂಡಿತ್ತು. ಆಕೆಯು ಕೊಠಡಿಯಲ್ಲಿ ಕುಳಿತು ಅಳುವುದಕ್ಕೆ ಪ್ರಾರಂಭಮಾಡಿದರು. ಆಗ ಪತ್ರೀಜಿಯುವರು "ವಾಸಿಮಾಡಿಕೊಳ್ಳುವುದು ನಿನ್ನ ಕೈಯಲ್ಲಿದೆ" ಎಂದು ಹೇಳಿ ಕೊಠಡಿಯಿಂದ ಹೊರಗೆ ಬಂದು ಕ್ರಿಕೆಟ್ ನೋಡಲು ಪ್ರಾರಂಭಿಸಿದರು. ಅರ್ಧ ಗಂಟೆಯಲ್ಲಿ ಕೊಠಡಿಯಿಂದ ಆಕೆಯು ನಗುತ್ತಾ ಹೊರಗೆ ಬಂದಳು. ಅವರು ಧ್ಯಾನಮಾಡಿದುದರಿಂದ ಅದು ಹೀಲಿಂಗ್‌ನಲ್ಲಿ ವಾಸಿಯಾಯಿತು.

2. ಎರಡನೆಯ ಉದಾಹರಣೆ ಏನೆಂದರೆ, ಪಿರಮಿಡ್ ಮಾಸ್ಟರ್ ಶ್ರೀ ಚಂದ್ರಶೇಖರ್ ರವರ ಅನುಭವ. ಒಂದು ದಿವಸ ತಮ್ಮ ಮನೆಯಲ್ಲಿ ಒಬ್ಬರೇ ಇದ್ದರು ಅವರು ಸ್ನಾನ ಮಾಡಲು ಬಿಸಿ ನೀರನ್ನು ಕಾಯಿಸಿಟ್ಟಿದ್ದರು. ಆಗ ಕೂಡಲೇ ಆ ನೀರು ಕೈ ತಪ್ಪಿ ತಮ್ಮ ಶರೀರದ ಮೇಲೆ ಬಿದ್ದ ಪರಿಣಾಮವಾಗಿ ದೇಹವೆಲ್ಲಾ ಸುಟ್ಟು ಹೋಯಿತು. ಆ ವೇಳೆಯಲ್ಲಿ ಯಾರೋ ಬೆಲ್ ಮಾಡಿದರು. ಕೂಡಲೇ ಅವರು ಒಂದು ಕಂಬಳಿಯಿಂದ ಶರೀರವನ್ನು ಮುಚ್ಚಿಕೊಂಡು ಬಾಗಿಲನ್ನು ತೆರೆಯಲು ಹೋದರು. ಇಬ್ಬರು ಹೊಸದಾಗಿ ಧ್ಯಾನ ಕಲಿಯಲು ಬಂದಿದ್ದರು. ಅವರಿಗೆ ಧ್ಯಾನದ ಬಗ್ಗೆ ಎಲ್ಲಾ ಸಮಾಚಾರವನ್ನು ನೀಡಿ, ಅವರನ್ನು 1 ಗಂಟೆಯ ಕಾಲ ಧ್ಯಾನಕ್ಕೆ ಕೂಡಿಸಿದರು. ಅನಂತರ, ಧ್ಯಾನ ಮುಗಿಸಿಕೊಂಡು ಅವರು ಹೊರಟು ಹೋದರು. ಅವರು ಹೋದ ಮೇಲೆ ತಮ್ಮ ಶರೀರದ ಮೇಲಿದ್ದ ಕಂಬಳಿಯನ್ನು ತೆಗೆದು ನೋಡಿದರೆ, ಅವರ ಶರೀರವೆಲ್ಲಾ ದೊಡ್ಡ ದೊಡ್ಡ ಬೊಬ್ಬೆಯಿಂದ ಕೂಡಿತ್ತು. ಹಾಗೆಯೇ ಧ್ಯಾನಕ್ಕೆ ಕುಳಿತು ಅನಂತರ ನಿದ್ದೆಯಲ್ಲಿ ಮುಳುಗಿದರು. ನಿದ್ದೆಯಲ್ಲಿ ಮಹಾವತಾರ ಬಾಬಾಜಿಯವರು ಬಂದು ಅವರ ಶರೀರವನ್ನೆಲ್ಲಾ ಹೀಲ್ ಮಾಡಿದರು. ಬೆಳಗ್ಗೆ ಎದ್ದು ನೋಡಿದರೆ ಅವರ ಶರೀರವೆಲ್ಲಾ ಪೂರ್ತಿವಾಸಿಯಾಗಿಬಿಟ್ಟಿತ್ತು. ನಂತರ, ಪತ್ರೀಜಿಯವರು ಹೀಗೆ ತಿಳಿಸಿದರು- "ಹೀಲಿಂಗ್ ವಿಧಾನವು ಆಸ್ಟ್ರಲ್‌ನಲ್ಲಿ ಜರುಗುವಂತದ್ದೇ ಹೊರತು ದೈಹಿಕವಾಗಿ ಆಗುವಂತದ್ದಲ್ಲ" ಎಂದರು. ಪತ್ರೀಜಿಯವರು 200 ದಿವಸಗಳಲ್ಲಿ ಬ್ರಹ್ಮರ್ಷಿ ಹೇಗೆ ಆಗಬಹುದೆಂದು ತಿಳಿಸಿದರು.

1. ಧ್ಯಾನಿ -ಯಾರು ಧ್ಯಾನ ಪ್ರಾರಂಭಿಸುತ್ತಾರೋ ಅವರು ಮನಸ್ಸನು ಗೆಲ್ಲುವುದಕ್ಕೆ ಪ್ರಾರಂಭಿಸುತ್ತಾರೆ.
2. ಯೋಗಿ- ಮನಸ್ಸನ್ನು ಗೆಲ್ಲುತ್ತಾನೆ.
3. ಋಷಿ- ಇವರ ಮೂರನೆಯ ಕಣ್ಣು ಉತ್ತೇಜಿತವಾಗುತ್ತದೆ.
4. ರಾಜರ್ಷಿ- ಇವನು ತನ್ನ ಗತ ಜನ್ಮಗಳನ್ನು ಮತ್ತು ಬೇರೆಯವರ ಗತ ಜನ್ಮಗಳನ್ನು ನೋಡಬಲ್ಲ.
5. ಬ್ರಹ್ಮರ್ಷಿ- ಪ್ರತಿಯೊಬ್ಬರಲ್ಲೂ ತನ್ನನ್ನು ತಾನೇ ನೋಡಿಕೊಂಡು ಏಕತ್ವದಲ್ಲಿ ಜೀವಿಸ ಬಲ್ಲ.

ಯಾರು ಮೇಲೆ ಕಾಣಿಸಿದ 5 ಅಂಶಗಳಲ್ಲಿ 40 ದಿವಸಗಳಂತೆ ಸಾಧನೆ ಮಾಡುತ್ತಾರೋ ಅವರು ಒಂದೊಂದರಲ್ಲಿಯೂ ಪ್ರಗತಿ ಸಾಧಿಸುತ್ತಾರೆ.

ಪತ್ರೀಜಿಯವರು ಅಕ್ಟೋಬರ್ 4ನೇ ತಾರೀಖು ಬೆಳಗ್ಗೆ 6 ರಿಂದ 7 ಗಂಟೆಯವರೆಗೆ ಎಲ್ಲರಿಂದಲೂ ಧ್ಯಾನ ಮಾಡಿಸಿದರು. ಆದಿವಸ ಪತ್ರೀಜಿಯವರು ನಮ್ಮಲ್ಲಿರುವ ಮೂರು ದೋಷಗಳ ಬಗ್ಗೆ ತಿಳಿಸಿದರು.

1. ತಮೋಗುಣ ದೋಷ - ಸೋಮಾರಿತನದಿಂದ ಕೂಡಿರುವವನು.
2. ರಜೋಗುಣ ದೋಷ - ನನಗೇ ಎಲ್ಲಾ ತಿಳಿದಿದೆ ಎಂಬ ಭಾವನೆಯಲ್ಲಿ ಇದ್ದವನು.
3. ಸಾತ್ವಿಕಗುಣ ದೋಷ - ಮತ್ತೊಬ್ಬರಿಗೆ ಉಪಕಾರ ಮಾಡಬೇಕೆಂಬ ಆಸೆಯುಳ್ಳವರು. ಅವರು ನಮ್ಮನ್ನು ಕೇಳುವವರೆವಿಗೂ ನಾವು ಅವರಿಗೆ

ಸಹಾಯ ಮಾಡಬೇಕಾಗಿಲ್ಲ, ಬೇರೆಯವರ ಹೋಂ ವರ್ಕ್ ನಾವು ಮಾಡಬಾರದು. ಚಿಕ್ಕ ಮಗುವಿಗೆ ಹೋಂ ವರ್ಕ್ ನಾವು ಮಾಡಿದರೆ, ನಾವೇ ಅವನನ್ನು ಹಾಳುಮಾಡಿದಂತಾಗುತ್ತದೆ. ಇದಕ್ಕೆ ಪತ್ರೀಜಿಯವರು ಮತ್ತೊಂದು ಉದಾಹರಣೆ ನೀಡಿದರು -ಪತ್ರಿಸಾರ್ ರವರ ಚಿಕ್ಕ ಮಗಳು ಹಿಂದಿನ ಜನ್ಮದಲ್ಲಿ ಅವಳ ಸ್ನೇಹಿತಳ ಕ್ಯಾನ್ಸರ್ ಹೀಲ್ ಮಾಡುತ್ತಾಳೆ. ಆಕೆಯ ಕ್ಯಾನ್ಸರ್ ಈಕೆಗೆ ಬಂದು ಅವಳು ಅದರಿಂದ ಸಾವನ್ನಪ್ಪಿದಳು. ಆದ್ದರಿಂದ, ಅವಳು ಈ ಭೂಮಿಯ ಮೇಲೆ ಪುನಃ ಜನ್ಮತೆಗೆದುಕೊಳ್ಳಬೇಕಾಯಿತು.

ಅಕ್ಟೋಬರ್ 5ನೇ ತಾರೀಖು ಮತ್ತೆ ವೇಣು ನಾದದೊಡನೆ ಪತ್ರೀಜಿಯವರು ಬೆಳಗ್ಗೆ 6 ರಿಂದ 7ರ ವರೆಗೆ ಧ್ಯಾನ ಮಾಡಿಸಿದರು. ಈ ದಿವಸ ಪತ್ರೀಜಿಯವರು

✦ ಪ್ರತಿಯೊಬ್ಬರೂ ಎಲ್ಲರಿಗೂ ಧ್ಯಾನ ಕಲಿಸಲೇಬೇಕೆಂದು ಒತ್ತಿ ಹೇಳಿದರು.

✦ ಧ್ಯಾನದಿಂದ ಬುದ್ಧಿಮಾಂಧ್ಯ ಮನುಷ್ಯನು ಸಾಧಾರಣ ಮನುಷ್ಯನಾಗುತ್ತಾನೆ, ಅಲ್ಲದೇ ಧ್ಯಾನದಿಂದ ಮನುಷ್ಯನು ಸೂಪರ್ ಮ್ಯಾನ್ ಆಗುವುದಿಲ್ಲ.

ನಂತರ, ಪತ್ರೀಜಿಯವರು ಕಾನ್ಷಿಯಸ್‌ನೆಸ್ ವಿಧಾನಗಳ ಬಗ್ಗೆ ತಿಳಿಸಿದರು.

1. ಸರ್ವೈವಲ್ ಕಾನ್ಷಿಯಸ್‌ನೆಸ್: ತನ್ನ ಸ್ವಂತ ಬದುಕನ್ನು ತಾನೇ ರೂಢಿಸಿಕೊಳ್ಳುವವನು.
2. ವನ್ ಅಪ್ ಮ್ಯಾನ್ಷಿಪ್ ಕಾನ್ಷಿಯಸ್‌ನೆಸ್: ಅಧಿಕಾರಕ್ಕೆ ಹೆಚ್ಚು ಆಸೆಪಡುವವನು.
3. ಫ್ಯುಟಿಲಿಟಿ ಕಾನ್ಷಿಯಸ್‌ನೆಸ್: ಜೀವನದಲ್ಲಿ ಬೇಸರಗೊಂಡು ತನ್ನೊಳಗೆ ತಾನು ಹೋಗಲು ಪ್ರಯತ್ನಿಸುವವನು.
4. ಸಿನ್ಸಿಯಾರಿಟಿ ಕಾನ್ಷಿಯಸ್‌ನೆಸ್: ತನಗೆ ವಹಿಸಿರುವ ಕೆಲಸವನ್ನು ನಿಷ್ಠೆಯಿಂದ ಮಾಡುವವನು.
5. ಸೀರಿಯಸ್‌ನೆಸ್ ಕಾನ್ಷಿಯಸ್‌ನೆಸ್: ಧ್ಯಾನವನ್ನು ತುಂಬಾ ಕಾಳಜಿಯಿಂದ ಮಾಡುವವನು.
6. ವಿಟ್ನೆಸ್ ಕಾನ್ಷಿಯಸ್‌ನೆಸ್: ಏನೇ ನಡೆದರು ಸಹ ಸಾಕ್ಷಿಯಂತೆ ನೋಡುತ್ತಿರುವವನು.
7. ಸ್ಮೈಲಿಂಗ್ ಕಾನ್ಷಿಯಸ್‌ನೆಸ್: ಸದಾ ಹಸನ್ಮುಖಿಯಾಗಿರುವವನು.
8. ಜೋಕರ್ ಕಾನ್ಷಿಯಸ್‌ನೆಸ್ : ಎಲ್ಲರಲ್ಲೂ ಜೊತೆಗೂಡುವವನು. ಉದಾ: ಇಸ್ಪೀಟ್ ಎಲೆಯಲ್ಲಿರುವ ಜೋಕರ್ ಹೇಗೆ ಎಲ್ಲ ಎಲೆಗಳಿಗೂ ಹೊಂದಿಕೆಯಾಗುವುದೋ ಹಾಗೆ ಜೋಕರ್ ಕಾನ್ಷಿಯಸ್‌ನಲ್ಲಿರುವವನು, ಸಣ್ಣ ಮಗುವಿನೊಡನೆ ಮಗುವಿನಂತೆಯೂ, ಹಿರಿಯರಲ್ಲಿ ಹಿರಿಯವನಂತೆಯೂ ಇರಬಲ್ಲನು.

ಸರ್ವೈವಲ್ ಕಾನ್ಷಿಯಸ್‌ನೆಸ್‌ನಿಂದ ಜೋಕರ್ ಕಾನ್ಷಿಯಸ್‌ನೆಸ್‌ಗೆ ಸೇರುವುದಕ್ಕೆ 400 ಜನ್ಮಗಳು ಬೇಕಾಗುತ್ತದೆ.

ಆ ದಿವಸ ಸಂಜೆ G.C.S.S ಬಹಳ ಚೆನ್ನಾಗಿ ನಡೆದುದರಿಂದ ಪತ್ರೀಜಿಯವರು ಸಂತೋಷದಿಂದ ಎಲ್ಲರಿಗೂ ಅಭಿನಂದನೆ ಸಲ್ಲಿಸಿದರು.

– ಸಂಪಾದಕೀಯ ತಂಡ



## ಪತ್ರೀಜಿ ಕ್ಯಾಲೆಂಡರ್ - ನವೆಂಬರ್ 2009



| | | | | | |
|---|---|---|---|---|---|
| ನವೆಂಬರ್ 1-3 | : ಬೆಂಗಳೂರು | ನವೆಂಬರ್ 10 | : ವರ್ನ | ನವೆಂಬರ್ 19-20 | : ವೈಜಾಗ್ |
| ನವೆಂಬರ್ 4 | : ಹಿಂದೂಪುರ | ನವೆಂಬರ್ 11 | : ಪಕ್ಕರ್‌ನಗರ್ | ನವೆಂಬರ್ 21 | : ಗುಂಟೂರು |
| ನವೆಂಬರ್ 5 | : ರಾಯಚೂರು | ನವೆಂಬರ್ 12 | : ಹೈದರಾಬಾದ್ | ನವೆಂಬರ್ 22-23 | : ಪ್ರಕಾಶಂ |
| ನವೆಂಬರ್ 6 | : ಮಹಬೂಬನಗರ | ನವೆಂಬರ್ 13 | : ಕೊಯಂಬತ್ತೂರ್ | ನವೆಂಬರ್ 24 | : ಹೈದರಾಬಾದ್ |
| ನವೆಂಬರ್ 7 | : ಆಚಂಪೇಟ | ನವೆಂಬರ್ 14-16 | : ತಿರುವನಂತಪುರ | ನವೆಂಬರ್ 25 | : ನಾಗಪುರ |
| ನವೆಂಬರ್ 8 | : ಷಾದ್‌ನಗರ್ | ನವೆಂಬರ್ 17-18 | : ಹೈದರಾಬಾದ್ | ನವೆಂಬರ್ 26 | : ಆದಿಲಾಬಾದ್ |
| ನವೆಂಬರ್ 9 | : ಹೈದರಾಬಾದ್ | | | ನವೆಂಬರ್ 27-30 | : ಹೈದರಾಬಾದ್ |



# ನಿಜವಾದ ಭಕ್ತಿ



ಭೀಮೇಶ್ ಕಲಂ ಟು ಕಾಲಂ

ಮೊದಲಿಗೆ ಭಕ್ತಿ ಎಂದರೇನು?

ಭಕ್ತಿ ಎನ್ನುವುದು ದೇಹಕ್ಕೆ ಸಂಬಂಧಪಟ್ಟಿದ್ದೇ, ಮನಸ್ಸಿಗೆ ಸಂಬಂಧಪಟ್ಟಿದ್ದೇ ಅಥವಾ ಬುದ್ಧಿಗೆ ಸಂಬಂಧಪಟ್ಟಿದ್ದೇ ... ಅಥವಾ ಇನ್ನಾವುದಾದರೂ ಬೇರೆಯದಕ್ಕೆ ಸಂಬಂಧಪಟ್ಟಿರುವುದೇ?

ಈಗ ಪ್ರಪಂಚದ 98% ಜನರು ಭಾವಿಸಿರುವುದು ದೇಹಕ್ಕೂ ಮತ್ತು ಮನಸ್ಸಿಗೆ ಸಂಬಂಧಪಟ್ಟಿರುವುದೆಂದು. ಆದಕ್ಕಾಗಿಯಲ್ಲವೇ ಪೂಜೆಗಳನ್ನು ಮಾಡುವುದು, ಭಜನೆ, ಕೀರ್ತನೆ ಅಥವಾ ಜಪಗಳು ನಾಮ ಸ್ಮರಣೆ ಇತ್ಯಾದಿಯನ್ನು ಮಾಡುವುದು. ಭಕ್ತಿಯನ್ನು ನಮಗಿಷ್ಟ ಬಂದ ರೀತಿಯಲ್ಲಿ ಬದಲಿಸಿಕೊಂಡು ಜೀವಿಸಿದ ಮಾತ್ರಕ್ಕೆ ಅದು ಭಕ್ತಿಯಾಗುವುದೇ?

ಭಕ್ತಿ ಎನ್ನುವುದು ಭಯದ ಭ್ರಮೆಯಿಂದ ಮಾಡುವ ಬುದ್ಧಿಗೇಡಿ ಕೆಲಸವಲ್ಲ!

ಭಕ್ತಿ ಎನ್ನುವುದು ಭಾವನೆಗಳಿಗೆ ಅತೀತವಾದದ್ದು!

ಭಕ್ತಿ ಎನ್ನುವುದು ನಿತ್ಯ ಸತ್ಯವಾದದ್ದು, ಶುದ್ಧ ಚೈತನ್ಯವಾದದ್ದು **pure consciousness.**



ಹಾಗೆ ಎಂದಾದರೂ ಒಂದು ದಿನ ನಾವಂದುಕೊಂಡಂತೆ ನಡೆಯದೇ ಜೀವನ ತಲೆಕೆಳಗಾದರೆ, ಆಗ ಏನು ಮಾಡಬೇಕೋ ತಿಳಿಯದಾಗುತ್ತದೆ. ಇಂಥಾ ಪ್ರಸಂಗಗಳು ಬಂದೊದಗಿದಾಗ ದೇವರುಗಳು ನಮ್ಮ ಪಾಲಿಗಿರಲಿ ಎಂದುಕೊಂಡು, ಅದನ್ನೇ ಮತ್ತೆ ಮತ್ತೆ ಅವರಿಗೆ ತಿಳಿಸುತ್ತಾ, ನಾನಿಷ್ಟೆಲ್ಲಾ ನಿಮಗೆ ಮಾಡಿದ್ದೇನೆ ಆದರೆ ನಿಮಗೆ ನನ್ನ ಮೇಲೆ ಯಾಕೆ ಕರುಣೆ ಇಲ್ಲ ಎಂದು ಅವರಿಗೆ ಜ್ಞಾಪಿಸುವುದೇ ಭಕ್ತಿಯೇ? ನನಗೆ ಬಂದಿರುವ ಇಂಥಾ ಕಷ್ಟಗಳಿಂದ ನನ್ನನ್ನು ರಕ್ಷಿಸು ನನಗೆ ಬೇಕಾಗಿರುವ ಇಂಥಂಥವುಗಳನ್ನೆಲ್ಲ ಕೊಡು ಎಂದು ಬೇಡಿಕೊಳ್ಳುವುದೇ ಭಕ್ತಿಯೇ?

ನಮಗೆ ಬಂದೊದಗುವ ಚಿಕ್ಕ ಪುಟ್ಟ ಅಥವಾ ದೊಡ್ಡ ತೊಂದರೆಗಳೇನೇ ಇರಲಿ ಅವೆಲ್ಲಕ್ಕೂ ದೇವರನ್ನು ಜೊತೆಗೆ ಬರುವಂತೆ ಕೇಳುತ್ತೇವೆ. ನಾವು ಪ್ರಾರ್ಥನೆ ಹೆಸರಿನಲ್ಲಿ ಜೀವನವನ್ನು ಹೇಗೆ ನಡೆಸಬೇಕೋ ಭಗವಂತನಿಗೆ ಆರ್ಡರ್ ಪಾಸ್ ಮಾಡುತ್ತೇವೆ. ಎಲ್ಲಿಯವರೆಗೆ ನಮ್ಮ ಮನಸ್ಸನ್ನು ಸಂದೇಹಗಳಿಂದ ತುಂಬಿಕೊಂಡಿರುತ್ತೇವೆಯೋ ಅಲ್ಲಿಯವರೆಗೆ ಭಕ್ತಿಯೆನ್ನುವುದು ಪ್ರವೇಶವಾಗುವುದಿಲ್ಲ, ಬದಲಾಗಿ, ಭಗವಂತನ ಹತ್ತಿರ ವಿನಯವನ್ನು ಪ್ರದರ್ಶಿಸುವ ನಟನೆ ಮಾತ್ರವೇ ಬರುತ್ತದೆ. ನಾವು ನಿಜವಾಗಲೂ ಭಗವಂತನನ್ನು ತುಂಬಾ ದೊಡ್ಡವನೆಂದು ತಿಳಿದುಕೊಂಡಿದ್ದರೆ, ನಾವಂದುಕೊಂಡಂತೆ ಜೀವನ ನಡೆಯದೇ ಹೋದರೂ, ಎಲ್ಲಾ ಭಗವಂತನ ಇಷ್ಟದ ಪ್ರಕಾರ ಜೀವನ ನಡೆಯುತ್ತಿದೆ ಎಂದು ಸಂತೋಷ ಪಡುತ್ತಿದ್ದೇವಾ? ಒಮ್ಮೆ ನೋಡಿಕೊಳ್ಳಿ. ಕೇವಲ ಬದುಕಿನ ಮೇಲಿನ ಭಯವೇ ದೈವದ ಮೇಲಿನ ನಂಬಿಕೆಯಾಗಿ ಬದಲಾಗುವುದಾದರೆ ನಿಮಗೆ ದೈವವೂ ದೊರಕುವುದಿಲ್ಲ ಹಾಗೂ ಬದುಕೂ ಸಹ ಉಳಿಯುವುದಿಲ್ಲ. ಭಯವು ಎಂದೆಂದಿಗೂ ಭಕ್ತಿಯಾಗಲು ಸಾಧ್ಯವಿಲ್ಲ. ನಮ್ಮಲ್ಲಿರುವುದು ದೇವರ ಬಗ್ಗೆ ಭಯವೇ ಅಥವಾ ಭಕ್ತಿಯೇ ಒಮ್ಮೆ ನಿಮ್ಮನ್ನು ನೀವೇ ಪ್ರಶ್ನಿಸಿಕೊಳ್ಳಿ.

ನೀವು ಎನ್ನುವ ಆಲೋಚನೆಯು ನಿಮ್ಮದು ಎನ್ನುವ ಭಾವನೆಯಲ್ಲಿದ್ದೆ, ಎಲ್ಲದರೊಂದಿಗೆ ಬೆರೆತು ಹೋಗುವ ಸ್ಥಿತಿಯು ಬಂದಾಗಲೇ ಭಕ್ತಿ ಎನ್ನುವುದನ್ನು ನಿರೂಪಿಸಿಕೊಳ್ಳಬಹುದು.

ನಿಮ್ಮ ಜೀವನಕ್ಕೆ ಭಗವಂತನನ್ನು ಜೊತೆಗೆ ಬರುವಂತೆ ಕೋರದೆ ಬದುಕುವುದನ್ನು ಕಲಿತುಕೊಂಡರೆ, ಹಾಗೆ ಹೋರಾಟವನ್ನು ಮುಂದುವರಿಸಿದರೆ, ಅದ್ವಿತೀಯವಾದ ಜೀವನ ನಿಮ್ಮದಾಗುತ್ತದೆ. ಮಹಾಭಾರತದಲ್ಲಿ ದ್ರೌಪದಿಯ ಜೊತೆಯಲ್ಲಿಯೇ ಶ್ರೀಕೃಷ್ಣನಿದ್ದರೂ ಸಹ, ದುಶ್ಯಾಸನು ಸಭಾ ಮಧ್ಯದಲ್ಲಿ ಎಳೆದು ತರುವ ಸಮಯದಲ್ಲಿ ಅಸಹಾಯಕಳಾದಾಗಲೂ ಶ್ರೀಕೃಷ್ಣನನ್ನು ಕರೆಯಲಿಲ್ಲ. ಸಭೆಯೊಳಗೆ ಬಂದಮೇಲೂ ತನ್ನ ಪ್ರಯತ್ನವನ್ನು ತಾನು ಮಾಡಿದಳು, ಮೊದಲು ತನ್ನ ಗಂಡಂದಿರ ಸಹಾಯವನ್ನು ಕೋರಿದಳು. ಆದಾಗದೆಂದು ತಿಳಿದ ನಂತರ, ಅಲ್ಲಿಯೇ ಕುಳಿತಿರುವ ಭೀಷ್ಮ, ದ್ರೋಣ, ಕೃಪಾಚಾರ್ಯರಂತಹ ಅತಿರಥಮಹಾರಥರೆಲ್ಲರನ್ನೂ ಸಹಾಯಮಾಡುವಂತೆ ಕೋರಿದಳು. ನಂತರ, ಮಹಾರಾಜನಾದ ಧೃತರಾಷ್ಟ್ರನನ್ನು ಬೇಡಿಕೊಂಡಳು. ಕೊನೆಗೆ ಅಲ್ಲಿರುವ ಯಾರೂ ತನ್ನ ಸಹಾಯಕ್ಕೆ ಬರುವುದಿಲ್ಲ ಎಂದು ತಿಳಿದಾಗ ತನ್ನ ಸ್ವಂತ ಬಲದೊಂದಿಗೆ ಸೀರೆಯ ಸೆರಗನ್ನು ಹಿಡಿದು ಹೋರಾಡಿದಳು ಇನ್ನೇನು ತನ್ನ ಬಲವೂ ಸಾಲುತ್ತಿಲ್ಲ ವೆಂದು ತನಗೆ ತಾನೇ ಸಂಪೂರ್ಣ ನಂಬಿದಾಗಲೇ ಶ್ರೀಕೃಷ್ಣನನ್ನು ಕರೆದದ್ದು. ನನ್ನ ಪಕ್ಕದಲ್ಲಿಯೇ ಇದ್ದಾನೆಂದು ಚಿಕ್ಕ ವಿಷಯಗಳಿಗೆ ಎಂದೆಂದೂ ಶ್ರೀಕೃಷ್ಣನನ್ನು ಉಪಯೋಗಿಸಿಕೊಳ್ಳಲಿಲ್ಲ. ಆ ರೀತಿಯೇನಾದರೂ ನಮ್ಮ ಹತ್ತಿರ ಶ್ರೀಕೃಷ್ಣನಿದ್ದರೆ, ಅವನಗತಿ ಏನಾಗುತ್ತಿತ್ತೋ ಅವನಿಗೇ ಗೊತ್ತು.

ನಾವು ಎಂದು ನಮ್ಮ ಸ್ವಶಕ್ತಿಯನ್ನು ನಂಬಿಕೊಂಡು ಜೀವನ ನಡೆಸುವುದನ್ನು ಕಲಿಯುತ್ತೇವೆಯೋ, ಆಗಲೇ ಭಗವಂತ ನಮ್ಮ ಜೊತೆಗಿರುತ್ತಾನೆ. ಸ್ವಶಕ್ತಿಯನ್ನು ನಂಬಿಕೊಂಡರೆ, ಮಾಡುವ ಕೆಲಸವನ್ನು ಸಕ್ರಮವಾಗಿ ಮಾಡುತ್ತೇವೆ. ಇಲ್ಲದಿದ್ದರೆ, ಪ್ರತಿ ಕೆಲಸಕ್ಕೂ ಭಗವಂತನನ್ನು ಕರೆಯುತ್ತೇವೆ. ಹಾಗೆ ಬರಲು ಆತನೇನಾದರೂ ನಮ್ಮ

ಸೇವಕನೇ ಅಥವಾ ನೀವು ಗುಡಿಗಳಲ್ಲಿ ಪೂಜೆ ಮಾಡಿದ್ದಕ್ಕಾಗಿ ಬರಲೇಬೇಕೆಂಬ ಕಟ್ಟಳೆ ಏನಾದರೂ ಇದೆಯೇ ಎಲ್ಲಿ ಪರಿಶುದ್ಧವಾದ ಮನಸ್ಸಿನೊಂದಿಗೆ ಪರಿಪೂರ್ಣವಾದ ಸಮರ್ಪಣಾ ಭಾವನೆಯೊಂದಿಗೆ ಕೆಲಸಮಾಡುತ್ತೇವೆಯೋ, ಅಲ್ಲಿ ದೇವರಿದ್ದೇ ಇರುತ್ತಾನೆ. ಅಂತಹ ಕೆಲಸಗಳೆಲ್ಲವೂ ಭಕ್ತಿಯಿಂದಲೇ ಕೂಡಿರುತ್ತವೆ.

ಜೀವನವೆಂದರೆ ಸಂಪೂರ್ಣವಾದ ಹೋರಾಟವೆಂದು ನಾವು ಎಂದಾದರೂ ಭಾವಿಸಿದ್ದೇವೆಯೇ. ಯಾಕೆಂದರೆ, ಹೋರಾಟವೆಂದರೆ ಜಗಳವೆಂದೇ ನಾವು ಭಾವಿಸಿದ್ದೇವೆ. ನಾವೆಂದಾದರೂ ಸಕಾರಾತ್ಮಕವಾಗಿ ಆಲೋಚಿಸುವುದನ್ನು ಕಲಿತುಕೊಂಡಿದ್ದರೆ ತಾನೇ? ಹೋರಾಟಕ್ಕೂ ಜಗಳಕ್ಕೂ ವ್ಯತ್ಯಾಸ ಗೊತ್ತಾಗುವುದು. ಹೋರಾಟವೆಂದರೆ ಜಗಳವಲ್ಲ.

ಹೋರಾಟವೆಂದರೆ, ಪ್ರತಿ ಕ್ಷಣ ನಮ್ಮನ್ನು ನಾವು ಉನ್ನತಕ್ಕೇರಿಸಿಕೊಳ್ಳುವುದು. ಉನ್ನತವಾಗಿ ಜೀವಿಸುವುದು. ನಾವು ಜೀವಿಸಲು ಜಗಳವಾಡುತ್ತಿದ್ದೇವೆಯೇ ಹೊರತು, ಹೋರಾಟ ಮಾಡುತ್ತಿಲ್ಲ. ಜಗಳವಾಡುವುದು ಹೇಡಿತನವಾದರೆ, ಹೋರಾಟಮಾಡುವುದು ವೀರತನ. ಹಿಂದಿನ ಕಾಲದಲ್ಲಿ ರಾಜ ಮಹಾರಾಜರು ರಾಜ್ಯಗಳನ್ನು ಜಗಳಮಾಡಿ ಗೆಲ್ಲಲಿಲ್ಲ, ಹೋರಾಡಿ ಗೆದ್ದರು. ಹೋರಾಟವೆನ್ನುವ ಶಬ್ದದಲ್ಲಿಯೇ ಶೌರ್ಯವಿದೆ. ಯಾರಲ್ಲಿ ಹೋರಾಡುವ ಶಕ್ತಿಯಿದೆಯೋ ಅವರು ಎಂದಿಗೂ ದೇವರನ್ನು ಜೊತೆಗೆ ಬರುವಂತೆ ಕೇಳುವುದೇ ಇಲ್ಲ, ಯಾಕೆಂದರೆ, ಅವರಿಗೆ ಗೊತ್ತು ವಿಜಯವಿದ್ದ ಕಡೆ ಭಗವಂತನಿರುತ್ತಾನೆ ಎಂದು. ಅದಕ್ಕೇ ಧೈರ್ಯೇ ಸಾಹಸೇ ಲಕ್ಷ್ಮೀ ಎನ್ನುತ್ತಾರೆ.

ಕೇವಲ ಊಟ, ಬಟ್ಟೆ ವಸತಿ ಸಂಸಾರಕ್ಕಾಗಿಯೇ ಜೀವನವಾದರೆ, ಅದರಲ್ಲಿಯೇ ಬಿದ್ದು ಒದ್ದಾಡುತ್ತಿದ್ದರೆ, ಅವುಗಳ ಸಲುವಾಗಿಯೇ ಹರಸಾಹಸ ಮಾಡುತ್ತಿದ್ದರೆ, ಅವುಗಳ ಸಲುವಾಗಿಯೇ ಭಗವಂತನನ್ನು ಕರೆಯುತ್ತಿದ್ದರೆ, ನಾವು ಭಗವಂತನನ್ನು ನಮ್ಮ ಪರವಾಗಿ ಜಗಳ ಆಡಲು 'ಬಾ' ಎಂದು ಕರೆದಂತೆಯೇ ವಿನಃ ಬೇರೆ ಯಾವುದಕ್ಕೂ ಅಲ್ಲ. ಪ್ರತಿ ನಿತ್ಯದ ಜೀವನಕ್ಕೆ ಬೇಕಾಗುವ ಈ ನಾಲ್ಕು ಸಹ ನಮ್ಮ ಸ್ವಶಕ್ತಿಯಿಂದ ನಾವು ಸಂಪಾದಿಸಲಾಗದೇ ಭಕ್ತಿಯೆಂಬ ಎರಡಕ್ಷರಗಳನ್ನು ಹೆಗಲಿಗೆ ತಗುಲಿಸಿಕೊಂಡು ಜೀವನ ನಡೆಸುತ್ತಿರುವುದು ಹಾಸ್ಯಾಸ್ಪದವಲ್ಲದೇ ಮತ್ತೇನು.

ನನ್ನ ಹತ್ತಿರ ಕೌನ್ಸೆಲಿಂಗ್‌ಗೆ ಬರುವ ಸುಮಾರು ಜನಗಳ ಪ್ರಶ್ನೆಯೇ ಇದು. ನಾನು ತುಂಬಾ ಹೊತ್ತು ಧ್ಯಾನ ಮಾಡುತ್ತೇನೆ ಹಾಗೂ ಧ್ಯಾನ ಪ್ರಚಾರ ಮಾಡುತ್ತೇನೆ ಪುಸ್ತಕಗಳನ್ನು ಓದುತ್ತೇನೆ, ಸತ್ಸಂಗ ಹಾಗೂ ಮಾಸ್ಟರ್‌ಗಳ ವಿಚಾರಗಳನ್ನು ಕೇಳುತ್ತೇನೆ. ಇಷ್ಟೆಲ್ಲಾ ಮಾಡಿದರೂ ನನಗೇಕೆ ಇಂಥಹ ಕಷ್ಟಗಳು ಬರುತ್ತವೆ ಎನ್ನುತ್ತಾರೆ. ಇಂಥವರು ಪೂಜೆಯ ಬದಲಾಗಿ ಧ್ಯಾನವನ್ನಿಟ್ಟುಕೊಂಡಿದ್ದಾರೆಂದೇ ಅರ್ಥ. ಧ್ಯಾನಕ್ಕೆ ಬರುವ ಮುಂಚೆ ತುಂಬಾ ಪೂಜೆ ಮಾಡುತ್ತಿದ್ದರು. ಆದರೆ, ಅಲ್ಲೇನು ಪ್ರಯೋಜನವಾಗಲಿಲ್ಲ, ಈಗ ಧ್ಯಾನಕ್ಕೆ ಬಂದಿದ್ದಾರೆ. ಇವರು ಮಾಡುವ ಒಂದು ಅಥವಾ ಎರಡು ಗಂಟೆ ಧ್ಯಾನಕ್ಕೆ ಇವರಂದುಕೊಂಡಂತೆ ಬದಲಾಗಬೇಕು. ಹಾಗಾಗದಿದ್ದರೆ, ಧ್ಯಾನದ ಮೇಲೆ ಸಂಶಯ ಬರುತ್ತದೆ. ಒಮ್ಮೊಮ್ಮೆ ಎಂಥಾ ಮೂರ್ಖ ಪ್ರಶ್ನೆಗಳನ್ನು ಕೇಳುತ್ತಾರೆಂದರೆ, ನಗುಬರುತ್ತದೆ. ಒಬ್ಬಾತ ತನಗೆ **motion problem** ಎಂದು ಬಂದ. 1 ಗಂಟೆ ಧ್ಯಾನ ಮಾಡುತ್ತೇನೆ. ಆರೋಗ್ಯ ಸರಿಹೋಗಬೇಕಲ್ಲಾ ? ಯಾಕೆ ಹೀಗೆ ಎಂದ? "ನಿಮ್ಮ ಊಟದ ವಿವರವನ್ನು ಕೊಡಿ" ಎಂದೆ. "ಬೆಳಿಗ್ಗೆ ಟಿಫನ್, ಮಧ್ಯಾಹ್ನ ಊಟ ಮತ್ತೆ ರಾತ್ರಿ ಊಟ" ಎಂದ? "ಸ್ವಾಮಿ, ಎಲ್ಲರೂ ಮಾಡುವುದು ಹಾಗೇನೆ. ಏನೇನು ತಿನ್ನುತ್ತೀರಿ ಹೇಳಿ ಎಂದೆ" ಆತ ಎಲ್ಲವನ್ನೂ ಹೇಳಿದ. ಆತನ ಊಟದಲ್ಲಿ ಹಸಿತರಕಾರಿ ಇಲ್ಲ. ಹಣ್ಣುಗಳಂತೂ ಮೊದಲೇ ಇಲ್ಲ. ಮೇಲಾಗಿ ಸಾಯಂಕಾಲವಾಗುತ್ತಲೇ ಜಂಕ್ ಫುಡ್‌ಗಳಾದ ಪಿಜ್ಜಾ ಬರಗರ್ ಮತ್ತು ಬೇಕರಿ ತಿನಿಸುಗಳನ್ನೇ ತಿನ್ನುತ್ತಾನೆ. ನೀರನ್ನು ಕಡಿಮೆ ಕುಡಿಯುತ್ತಾನೆ. ಯಾವುದೇ ಶಾರೀರಿಕ ವ್ಯಾಯಾಮವಿಲ್ಲ, ರಾತ್ರಿ 1 ಗಂಟೆಯವರೆಗೆ ಟಿ.ವಿ. ನೋಡುತ್ತಾನೆ. ಬೆಳಗ್ಗೆ 8 ಗಂಟೆಯ ಮೇಲೆ ಏಳುತ್ತಾನೆ ಆಗಾಗ ಧ್ಯಾನ ಮಾಡುತ್ತಾನಂತೆ. ಯಾರೋ ಹೇಳಿದರಂತೆ ಧ್ಯಾನ ಮಾಡಿದರೆ ಸಾಕು, ಹೇಗೆ ಬೇಕಾದರೆ ಹಾಗೆ ಜೀವಿಸಬಹುದು ಎಂದು. ಹಾಗಿದ್ದ ಮೇಲೆ **motion problem** ಬರದೇ ಇರುತ್ತದೆಯೇ? ಮಾಡುವ ಕೆಲಸ ಸರಿಯಾಗಿ ಮಾಡದೇ ಒಂದು ಗಂಟೆ ಕಣ್ಣು ಮುಚ್ಚಿ ಕೊಂಡು ಕುಳಿತು ನನಗೆಲ್ಲಾ ಸರಿಹೋಗಬೇಕು ಎಂದರೆ ಆದೀತೇ?

ಜೀವನದಲ್ಲಿಯೂ ಕೂಡ ನಾವು ಮಾಡುತ್ತಿರುವ ಕೆಲಸವನ್ನು ಸರಿಯಾಗಿ ಮಾಡಿದರೆ, ಸರಿಯಾದ ಫಲಿತಾಂಶವಿದ್ದೇ ಇರುತ್ತದೆ. ಮಾಡುವ ಕೆಲಸವನ್ನು ಸರಿಯಾಗಿ ಮಾಡದೇ, ಫಲಿತಾಂಶ ಮಾತ್ರ ಸರಿಯಾಗಿರಬೇಕೆಂದರೆ ಸಾಧ್ಯವೇ? ಪೂಜೆಯ ಬದಲಾಗಿ ನೀವು ಧ್ಯಾನವನ್ನಿಟ್ಟುಕೊಂಡರೆ ಅಥವಾ **Replace** ಮಾಡಿದರೆ ನಿಮಗೆ ಪೂಜೆಯೂ ಸಿಗುವುದಿಲ್ಲ , ಧ್ಯಾನವೂ ಹತ್ತುವುದಿಲ್ಲ. ನಾವು ಧ್ಯಾನಿಗಳಾದ ಮಾತ್ರಕ್ಕೆ ಎಲ್ಲವೂ ನಾವಂದುಕೊಂಡಂತೆ ನಡೆದರೆ, ಈ ಪ್ರಪಂಚದ 640 ಕೋಟಿ ಜನರೆಲ್ಲ ಧ್ಯಾನವನ್ನೇ ಮಾಡುತ್ತಾರೆ. ಅದಕ್ಕೇ ತುಂಬಾ ಜನರು ಧ್ಯಾನ ಮಾಡುವವರು ಪೂಜೆ ಮಾಡಬಾರದು ಎಂದು ಹೇಳುತ್ತಾರೆ. ಯಾಕೆಂದರೆ, ಅವರಿಗೆ ಧ್ಯಾನಕ್ಕೂ ಪೂಜೆಗೂ ವ್ಯತ್ಯಾಸವೇ ಗೊತ್ತಿಲ್ಲ. ಪೂಜೆಗಳಿಂದ ಈಡೇರದ ಬಯಕೆಗಳು ಧ್ಯಾನದಿಂದ ಈಡೇರುತ್ತವೆ ಎಂಬ ನಂಬಿಕೆಗಳಿಂದ ಧ್ಯಾನ ಪ್ರಾರಂಭ ಮಾಡಿದ್ದರೆ ಅದರಂತಹ ಮೂರ್ಖತನ ಮತ್ತೊಂದಿಲ್ಲ. ಅಂಥವರು ಎಂದೆಂದಿಗೂ ಧ್ಯಾನಿಗಳಾಗಲು ಸಾಧ್ಯವಿಲ್ಲ. ಅವರೆಂದೆಂದಿಗೂ ಭಕ್ತಿವಂತರಾಗಲಾರರು, ದೈವತ್ವವನ್ನು ನೋಡಲಾರರು.

ಎಂದು ನಾವು ಜೀವಿಸಲು ಜಗಳವಾಡದೇ, ನಮ್ಮ ಜೀವನಕ್ಕಾಗಿ ಭಗವಂತನನ್ನು ಕೂಗದೇ, ನಮ್ಮ ಸ್ವಶಕ್ತಿಯಿಂದ ನಮ್ಮ ಮೇಲಿನ ನಂಬಿಕೆಯಿಂದ ಹೋರಾಟವಾಡಲು ಪ್ರಾರಂಭಿಸುತ್ತೇವೆಯೋ, ಆಗ ನಮಗೆ ಬೇಕಾಗಿರುವ ಎಲ್ಲವೂ ಲಭಿಸುತ್ತವೆ. ಅದಾದ ನಂತರ, ಮನಸ್ಸು ಯಾವುದಕ್ಕಾಗಿ ಪರಿತಪಿಸುತ್ತಿದೆಯೋ ನೋಡಿಕೊಳ್ಳಿರಿ. ಆ ರೀತಿಯಲ್ಲಿ ಪರಿತಪಿಸುತ್ತಿದ್ದರೆ, ನಿಮ್ಮಲ್ಲಿ ಈ ಪ್ರಶ್ನೆಗಳ ಉದ್ಭವವಾಗಲೇಬೇಕು?
**ಈ ಸೃಷ್ಟಿಗೆ ಮೂಲ ಯಾವುದು?**

**ನಾನು ಯಾರು? ಎಲ್ಲಿಂದ ಬಂದೆ? ಬಂದದ್ದಾದರೂ ಯಾಕೆ?** ನಂತರ ಎಲ್ಲಿಗೆ ಹೋಗುವೆ? ಎನ್ನುವ ಕುತೂಹಲ ಮೂಡುತ್ತದೆ. ಆಗ ಉದ್ಭವವಾಗುವುದೇ ನಿಜವಾದ ಆಧ್ಯಾತ್ಮಿಕತೆ. ಆಗಲೇ ನೀವು

ನಿಜವಾಗಿಯೂ ಭಗವಂತನನ್ನು ದರ್ಶಿಸಬೇಕೆಂದು ಸಿದ್ಧರಾಗುತ್ತೀರಿ. ಯಾವಾಗ ನಿಮ್ಮಲ್ಲಿ ಇಂತಹ ವಿಷಯಗಳಿಗಾಗಿ ಭಗವಂತನನ್ನು ದರ್ಶಿಸಬೇಕೆಂಬ ಹಂಬಲ ಮೂಡುವುದೋ ಅದೇ ನಿಜವಾದ ಭಕ್ತಿ ಎನಿಸಿಕೊಳ್ಳುತ್ತದೆ. ಇಲ್ಲದೇ ಹೋದಲ್ಲಿ ಕೆಲಹೊತ್ತು ಹೊಗಳುತ್ತಾ, ಕೆಲಹೊತ್ತು ಬೈಯುತ್ತಾ ಇಡೀ ಜೀವನವನ್ನು ಸವೆಸುವುದೇ ಆಗುತ್ತದೆ.

ಭಗವಂತನಲ್ಲಿ ಏನನ್ನೂ ಆಶಿಸದೇ ನಮ್ಮನ್ನು ನಾವು ಸಂಪೂರ್ಣವಾಗಿ ಸಮರ್ಪಿಸಿಕೊಳ್ಳುವುದೇ ನಿಜವಾದ ಭಕ್ತಿ. ಭಕ್ತಿಯೆಂದರೆ ನಿಷ್ಕಲ್ಮಷವಾದ ಪ್ರೇಮ. ತಾಯಿ ಮಗುವಿಗೆ ಹಾಲುಣಿಸುವಾಗ, ಕಾಲಿನಿಂದ ತಾಯಿಯ ಎದೆಯನ್ನು ಒದೆಯುತ್ತದೆ, ಆ ಮಗು. ಆಗ ಅಯ್ಯೋ ಕಂದಾ ನಿನ್ನ ಕಾಲಿಗೇನಾದರೂ ನೋವಾಯಿತೇ ಎಂದು ತನ್ನ ಎದೆಗೊದ್ದ ಪಾದವನ್ನು ಮುದ್ದಾಡುತ್ತಾಳೆ, ಆ ತಾಯಿ. ಅದು ನಿಜವಾದ ಭಕ್ತಿ. ಸಂಸಾರ ನಡೆಸುವಾಗ ಬಂದೊದಗುವ ಕಷ್ಟಗಳಿಗೆ ದೇವರನ್ನು ಬೈದುಕೊಳ್ಳುವುದಾದರೆ, ಆ ತಾಯಿ ತನ್ನೆದೆಗೊದ್ದ ಪಾದವನ್ನು ಬೈದುಕೊಂಡಂತೆಯೇ ಆಗುತ್ತದೆ. ನಮ್ಮ ಜೀವನದಲ್ಲಿ ಯಾವುದೇ ಪರಿಸ್ಥಿತಿಯು ಬಂದೊದಗಿದರೂ ಭಗವಂತನನ್ನು ಪ್ರೇಮಿಸುತ್ತಲೇ ಇರಬೇಕು.

ಭಕ್ತಿ ಎನ್ನುವುದು ಪೂಜೆಗಳಿಂದ, ಜಪತಪಗಳಿಂದ ಹೋಮ ಯಜ್ಞಗಳಿಂದ ನಿರೂಪಿತವಾಗುವುದಿಲ್ಲ. ಹಾಗೆ ನಿರೂಪಿತವಾಗುವುದಾದರೆ, ಅದಕ್ಕೆ ಭಕ್ತಿ ಎನ್ನುವುದೇ ಇಲ್ಲ. ಅವೆಲ್ಲವೂ ಯಾವುದಾದರೊಂದು ಕೋರಿಕೆಗಳಿಗೆ ಸಂಬಂಧ ಪಟ್ಟಿದ್ದೇ ಇರುತ್ತದೆ. ಭಕ್ತಿ ಎನ್ನುವುದು ಪರಮ ಪವಿತ್ರವಾದುದು. ತಾಯಿಗೆ ತನ್ನ ಮಕ್ಕಳ ಕುರಿತು ಆಲೋಚನೆ ಇರಬೇಕು ತನಗಾಗಿ ಮಕ್ಕಳಲ್ಲದೇ, ಮಕ್ಕಳಿಗೋಸ್ಕರವೇ ತಾನು ಜೀವಿಸಿದರೆ ಅದು ನಿಜವಾದ ತಾಯ್ತನವಾಗುತ್ತದೆ. ಯಾವ ಆಕಾಂಕ್ಷೆಯೂ ಇಲ್ಲದೇ ಮಕ್ಕಳನ್ನೂ ದೇವರಂತೆ ಯಾವ ತಾಯಿ ಪ್ರೇಮಿಸುತ್ತಾಳೋ, ಅಂತಹ ತಾಯಿಯರು ಮಾತ್ರ ಭಕ್ತಿಯನ್ನು ಕುರಿತು ತಿಳಿದಿರುತ್ತಾರೆ. ಅಂತಹ ತಾಯಂದಿರಿಗೆ ಮಾತ್ರವೇ ಭಕ್ತಿಯ ಕುರಿತು ಅವಗಾಹನೆ ಇರುತ್ತದೆ. ತನ್ನ ಮಕ್ಕಳನ್ನು ಮತ್ತೊಬ್ಬರ ಮಕ್ಕಳಿಗೆ ಹೋಲಿಕೆ ಮಾಡದೇ ಯಾವುದೇ ನಿಯಮ ನಿಬಂಧನೆಗಳನ್ನು ಹಾಕದೇ, ಇರುವ ಹಾಗೇ ಪ್ರೇಮಿಸುತ್ತಿದ್ದರೆ ಮಾತ್ರ ನಿಜವಾದ ತಾಯ್ತನ ಎನಿಸಿಕೊಳ್ಳುತ್ತದೆ. ಇದು ಕೇವಲ ಮಕ್ಕಳಾಗಿದ್ದಾಗ ಮಾತ್ರವಲ್ಲದೇ ಜೀವನದುದ್ದಕ್ಕೂ ಇರಬೇಕು. ಮಕ್ಕಳಾಗಿದ್ದಾಗ ಒಂದು ರೀತಿ, ಬೆಳೆದು ದೊಡ್ಡವರಾದ ಮೇಲೆ ಮತ್ತೊಂದು ರೀತಿ ಎಂದರೆ ಅಂತಹ ತಾಯ್ತನಕ್ಕೆ ಅರ್ಥವೇ ಇರುವುದಿಲ್ಲ. ತನ್ನನ್ನು ಸರಿಯಾಗಿ ನೋಡಿಕೊಳ್ಳಲಿಲ್ಲವೆಂದೋ ಅಥವಾ ತಾನು ಹೇಳಿದಂತೆ ಕೇಳುತ್ತಿಲ್ಲವೆಂಬ ಸಿಟ್ಟಿನಿಂದ ಸೊಸೆಯರನ್ನು ಹಿಂಸಿಸುವ ತಾಯಂದಿರಿಗೆ ಭಕ್ತಿ ಕುರಿತು ತಿಳಿಯುವುದೇ ಇಲ್ಲ. ಮಾಡಬಾರದ ಕೆಲಸಗಳು ಯೋಚಿಸಬಾರದ ಆಲೋಚನೆಗಳು ಆಡಬಾರದ ಮಾತುಗಳನ್ನಾಡುತ್ತಾ ಎಷ್ಟು ಹೊತ್ತು ಪೂಜಾಮಂದಿರದಲ್ಲಿ ಕುಳಿತರೂ ಭಜನೆಗಳನ್ನು ಮಾಡಿದರೂ ಭಗವಂತನ ಮೇಲೆ ಭಕ್ತಿಯನ್ನು ಪ್ರದರ್ಶಿಸಲಾಗುವುದಿಲ್ಲ. ಯಾಕೆಂದರೆ...ಭಗವಂತನೆಂದರೆ ಪ್ರೇಮ! ಪ್ರೇಮವೆಂದರೆ ಭಗವಂತ! ಭಕ್ತಿ ಎನ್ನುವ ಪದವನ್ನು ಬಳಸುತ್ತಿದ್ದೀರಿ ಎಂದಾದರೆ ಕೋರಿಕೆಗಳಿಗೆ ಅಲ್ಲಿ ಅವಕಾಶವಿರಬಾರದು. ದೇವರಲ್ಲಿ ಕೋರಿಕೆಯ ಲಿಸ್ಟನ್ನು ಓದುತ್ತಿದ್ದೀರೆಂದರೆ ಭಕ್ತಿ ಎನ್ನುವ ಪದವನ್ನು ಮನಸ್ಸಿನಲ್ಲಿಯೂ ಅಂದುಕೊಳ್ಳಬೇಡಿ. ಸಂಪೂರ್ಣವಾದ ಶರಣಾಗತಿಯಿಂದ ನಿಷ್ಕಲ್ಮಷವಾದ ಪ್ರೇಮದಿಂದ ಹೃದಯವನ್ನು ತುಂಬಿಸಿಕೊಳ್ಳುವುದೇ ನಿಜವಾದ ಭಕ್ತಿ. ಅಂತಹ ಭಕ್ತಿವಂತರಾಗಿ ಬಾಳೋಣ.

— ಶ್ರೀ ಕೆ. ಭೀಮೇಶ್ ರೆಡ್ಡಿ, ಅಧ್ಯಕ್ಷರು
ಕರ್ನಾಟಕ ಪಿರಮಿಡ್ ಧ್ಯಾನ ಪ್ರಚಾರ ಟ್ರಸ್ಟ್, ಬೆಂಗಳೂರು

## Life Is Beautiful
### ಸುಮಧುರವೀ ಜೀವನ (ಆನಂದ ವಿಜ್ಞಾನ ಶಾಸ್ತ್ರ ತಿಳಿಸಿಕೊಡುವ ಶಿಬಿರ)

ಶಿಬಿರದ ವಿವರಗಳು (ಸೂಚನೆ: ಶಿಬಿರದಲ್ಲಿ ಭಾಗವಹಿಸಲು ಇಚ್ಛೆವುಳ್ಳವರು ಮುಂಗಡವಾಗಿ ಕೆಳಗಿನ ದೂರವಾಣಿಗೆ ತಿಳಿಸ ತಕ್ಕದು.

| ದಿನಾಂಕ | ವಿಳಾಸ | ಹೆಚ್ಚಿನ ಮಾಹಿತಿಗಾಗಿ ಸಂಪರ್ಕಿಸಿರಿ |
|---|---|---|
| 6ನೇ ನವೆಂಬರ್ | ಆದೋನಿ, ಕರ್ನೂಲ್ ಜಿಲ್ಲೆ, ಆಂಧ್ರಪ್ರದೇಶ್ | ರಾಮಾಂಜನೇಯ ಶೆಟ್ಟಿ 9849540631 |
| 15ನೇ ನವೆಂಬರ್ | ಬಳ್ಳಾರಿ, ಕರ್ನಾಟಕ | ಸಂತೋಷ್-9738462773; ಸೂರ್ಯನಾರಾಯಣ-9448930557 |
| 22ನೇ ನವೆಂಬರ್ | ದಾವಣಗೆರೆ, ಕರ್ನಾಟಕ | ಸಂತೋಷ್-9738462773; ಅನಿಮಿಷ-9449599201<br>ಲೋಕೇಶ್ ಭೋಂಸ್ಲೆ-9019129230 |
| 29ನೇ ನವೆಂಬರ್ | ಚಿಕ್ಕೋಡಿ, ಬೆಳಗಾವಿ ಜಿಲ್ಲೆ, ಕರ್ನಾಟಕ | ಕೇಶಪ್ಪ-9342127540 |
| 6ನೇ ಡಿಸೆಂಬರ್ | ಗುಲಬರ್ಗಾ, ಕರ್ನಾಟಕ | ವಿಜಯ ಕುಮಾರ್-9342351087 |
| 12,13ನೇ ಡಿಸೆಂಬರ್ | ಪಿರಮಿಡ್ ವ್ಯಾಲಿ, ಬೆಂಗಳೂರು | ಸಂತೋಷ್-9738462773; ಹರೀಶ್-9481359920 |
| 20ನೇ ಡಿಸೆಂಬರ್ | ಗೌರಿಬಿದನೂರು, ಚಿಕ್ಕಬಳ್ಳಾಪುರ ಜಿಲ್ಲೆ | ವರಾಹಮೂರ್ತಿ-9242162725 |

# ಶಾಪಗಳು ವರಗಳು




11-11-07 ಬೆಳಗಿನ ಜಾವ 5-30 ಘಂಟೆಯಲ್ಲಿ ತಣ್ಣನೆ ಗಾಳಿಯು ಶರೀರಕ್ಕೆ ತಗಲುತ್ತಿರುವಾಗ ಸೂರ್ಯೋದಯದ ಛಾಯೆಗಳು ಮನಸ್ಸನ್ನು ಆಹ್ಲಾದ ಪಡಿಸುತ್ತಿರುವಾಗ ಬ್ರಹ್ಮರ್ಷಿ ಪತ್ರೀಜಿಯವರೊಡನೆ "ಮೈತ್ರೇಯ ಬುದ್ಧ" ಸ್ಕಾರ್ಪಿಯೋದಲ್ಲಿ ನಾವೆಲ್ಲರೂ ಎಂದರೆ, ನಾನು ಮೇಡಂ ಸ್ವರ್ಣಮಾಲಾ ಪತ್ರೀಜಿ, ಪತ್ರೀಜಿ ಅಕ್ಕ ಡಾ.ಸುಧಾ ಕೊಡೂರಿ, ಅವರ ಭಾವ ಕೊಡೂರಿ ರಾಮಕೃಷ್ಣ ರವರು, ಮಾಸ್ಟರ್ ಶೀನು, ಮಾಸ್ಟರ್ ದಾಮೋದರ್ - ಎಲ್ಲರೂ ತಿರುಪತಿಯಿಂದ ತಿರುಮಲಕ್ಕೆ ಹೊರಟೆವು. ಮತ್ತೊಂದು ಕಾರಿನಲ್ಲಿ ಮಾಸ್ಟರ್ ಗುಣಾಕರ್‌ರವರು, ಮಾಸ್ಟರ್ ಶಿವಪ್ರಸಾದ್ ಮತ್ತೆ ಪತ್ರೀಜಿಯವರ ಹಿರಿಯ ಮಗಳು 'ಮುನ್ನಿ' ನಮ್ಮನ್ನು ಹಿಂಬಾಲಿಸಿದರು. ಪ್ರಕೃತಿಯನ್ನು ನೋಡುತ್ತಾ ಅನಿರ್ವಚನೀಯವಾದ ಅನುಭೂತಿಯನ್ನು ಆಸ್ವಾದಿಸುತ್ತಾ ಹೊರಟಿರುವಾಗ ಪತ್ರೀಜಿಯವರು ನನಗೆ ಒಂದು ಪ್ರಶ್ನೆಯನ್ನು ಹಾಕಿದರು.

**ಪತ್ರೀಜಿ:** "ಮುರಳಿ! ವೆಂಕಟೇಶ್ವರ ಸ್ವಾಮಿಯನ್ನು ಏನು ಬೇಕೆಂದು ಕೇಳಿಕೊಳ್ಳುತ್ತಿಯ?"

**ಮುರಳಿಧರ್ :** ಸಾರ್ 2006 ರಲ್ಲಿ ಷಿರಿಡಿ ಸಾಯಿಯನ್ನು ತೋರಿಸಿದಿರಿ. ಅಕ್ಟೋಬರ್ 2007ನಲ್ಲಿ ಸತ್ಯಸಾಯಿಯನ್ನು ತೋರಿಸಿದಿರಿ. ಈಗ ವೆಂಕಟೇಶ್ವರ ಸ್ವಾಮಿಯನ್ನು ತೋರಿಸಲು ಹೋಗುತ್ತಿದ್ದೀರಾ. ಈಗ ಇಷ್ಟೆ ಸಮಾಚಾರಾ.

**ಪತ್ರೀಜಿ:** ವೆಂಕಟೇಶ್ವರ ಸ್ವಾಮಿಯನ್ನು ತೋರಿಸುವುದಿಲ್ಲ, ಆದರೆ, ಬೆಟ್ಟಗಳು ಗುಡ್ಡಗಳನ್ನು ತೋರಿಸುತ್ತೇನೆ.

**ಮುರಳಿಧರ್:** ನೀವು ಯಾವುದು ತೊರಿಸುತ್ತೇನೆ ಎಂದರೆ ಅದನ್ನೇ ನೋಡುತ್ತೇವೆ.

"ನೀನು ಏನು ಕೇಳಿ ಕೊಳ್ಳುತ್ತೀಯೇ?"

**ಪತ್ರೀಜಿ:** "ಶೀನು, ನೀನು ಏನು ಕೇಳಿ ಕೊಳ್ಳುತ್ತೀಯೆ ವೆಂಕಟೇಶ್ವರ ಸ್ವಾಮಿಯನ್ನು?"

**ಶೀನು:** 2020 ರಲ್ಲಿ ನಡೆಯುವ ವಿಶ್ವ ಕ್ರಿಕೆಟ್ ಮ್ಯಾಚ್ ನಿಮ್ಮೊಡನೆ ಕುಳಿತು ನೋಡಬೇಕೆಂದು ಕೇಳಿ ಕೊಳ್ಳುತ್ತೇನೆ.

**ಪತ್ರೀಜಿ:** ನೀನು ಏನು ಕೇಳಿಕೊಳ್ಳುತ್ತೀಯೆ ಎಂದು ಮೇಡಂ ಸ್ವರ್ಣಮಾಲಾರವರನ್ನು ಕೇಳಿದರು.

**ಮೇಡಂ:** ಎಲ್ಲರೂ ಸುಖ-ಶಾಂತಿಯಿಂದ ಇರಬೇಕೆಂದು ಕೇಳಿಕೊಳ್ಳುತ್ತೇನೆ.

**ಪತ್ರೀಜಿ:** "ನೀನು ಏನನ್ನು ಕೇಳಿಕೊಳ್ಳುತ್ತೀಯೆ" ಎಂದು ಮೇಡಂ ಸುಧಾ ರವರನ್ನು ಕೇಳಿದರು.

**ಡಾ.ಸುಧಾ:** "ನಿನ್ನೊಡನೆ ನಾವು ಈ ವಿಧವಾಗಿ ಪ್ರಯಾಣ ಮಾಡಬೇಕೆಂದು ಕೇಳಿಕೊಂಡೆ!" ಅದು ನೆರವೇರಿದೆ. ನನಗೆ ಇನ್ನು ಯಾವ ಕೋರಿಕೆಯೂ ಇಲ್ಲ.

**ಪತ್ರೀಜಿ:** "ನೀನು ಹೇಳಪ್ಪ 'ದಾಮೋದರ್' ಸ್ವಾಮಿಯನ್ನು ಏನು ಕೇಳಿಕೊಳ್ಳುತ್ತೀಯೆ?

**ದಾಮೋದರ್:** "ನಿಮ್ಮ ಕೋರಿಕೆಯೆ ನನ್ನ ಕೋರಿಕೆ ಸಾರ್"

"ನೀವು ಏನು ಕೇಳಿಕೊಳ್ಳುತ್ತೀರಾ?"

ನಾವೆಲ್ಲಾ ಕೂಡಿ ಪತ್ರೀಜಿಯವರನ್ನು "ನೀವು ಏನು ಕೇಳಿಕೊಳ್ಳುತ್ತೀರಾ?" ಎಂದು ಕೇಳಿದೆವು.

**ಪತ್ರೀಜಿ:** ಪ್ರಾಣಿಗಳನ್ನು ಸಾಯಿಸಿ, ರಾಕ್ಷಸರಂತೆ ಅವುಗಳನ್ನು ತಿನ್ನುತ್ತಿರುವವರನ್ನು ಸಾಯಿಸಬೇಕೆಂದು, ಸಾಯಿಸಲ್ಪಡುತ್ತಿರುವಾಗ ಅನುಭವಿಸುವ ಆ ನರಕವನ್ನು ಅವರಿಗೂ ರುಚಿ ತೋರಿಸು ಎಂದು ಕೇಳಿಕೊಳ್ಳುತ್ತೇನೆ...!

(ಸ್ವಲ್ಪ ವಿರಾಮದ ನಂತರ, ನಾನು ಪತ್ರೀಜಿ ಎದುರಿಗೆ ಒಂದು ಸಂದೇಹವನ್ನು ವ್ಯಕ್ತಪಡಿಸಿದೆನು)

**ಮುರಳಿ:** ಸಾರ್, ಕೋರಿಕೆಗಳಲ್ಲಿ 'ಬೆಸ್ಟ್' ಕೋರಿಕೆ ಯಾವುದು?

**ಪತ್ರೀಜಿ:** ಮುರಳಿ! ಕೋರಿಕೆಯಲ್ಲಿ 'Best', 'Worst' ಎಂಬುದು ಇಲ್ಲ. ಒಟ್ಟಾರೆ, ಯಾವ ಕೋರಿಕೆಯೂ ಇರಬಾರದು.

**ಮುರಳಿ:** ಕೋರಿಕೆ ಇಲ್ಲದಿದ್ದರೆ, ಮನುಷ್ಯನಲ್ಲಿ ನಿರ್ಲಿಪ್ತತೆ ಉಂಟಾಗುವುದಲ್ಲವೇ? ಪ್ರಗತಿ ಆಗುವುದಿಲ್ಲವಾ?

**ಪತ್ರೀಜಿ:** "ಪ್ರತೀ ಕೋರಿಕೆಯು ದುಃಖಕ್ಕೆ ದಾರಿಮಾಡುತ್ತದೆ. ಕೋರಿಕೆಯಲ್ಲಿ ಬದುಕುವವನು ಶಾಂತಿಯನ್ನು ಹೊಂದುವುದಿಲ್ಲ". ಮನುಷ್ಯನಿಗೆ ಇರಬೇಕಾದುದು ಕೋರಿಕೆಯಲ್ಲ, ಯಾರಾದರೂ,

ಯಾವುದನ್ನಾದರೂ ಕೇಳುವುದೇ ಬೇಡ. ಯಾರ ಹತ್ತಿರದಿಂದಲಾದರೂ 'ತಿಳಿದುಕೊಳ್ಳುವುದು' ಮಾತ್ರವೇ ಇರಬೇಕು! ಯಾರಿಗೆ ಏನು ಬೇಕೋ ಅದರಲ್ಲಿ ಪ್ರಾವೀಣ್ಯ ಸಂಪಾದಿಸಿದವರ ಬಳಿ Technology ತಿಳಿದುಕೊಂಡು ಪ್ರಯತ್ನ ಮಾಡಿ ಅದನ್ನು ಸಿದ್ಧಿಮಾಡಿಕೊಳ್ಳಬೇಕು. ಅಷ್ಟೇ ಅಲ್ಲದೇ ಕೋರಿಕೆಯನ್ನು ತೀರಿಸು ಎಂದು ಯಾರನ್ನೂ ಕೇಳಿಕೊಳ್ಳಬಾರದು! ಒಂದು ವೇಳೆ ಹಾಗೆ ಕೇಳಿದ ವರಗಳು ಕೊಟ್ಟರೂ ಸಹ ಅವಗಳು ಶಾಪಗಳೇ ಅಲ್ಲದೇ ವರಗಳು ಅಲ್ಲ ಎಂದು ಮಾತ್ರ ಗುರುತಿಸಿಕೊಳ್ಳಬೇಕು.

**"ಕೇಳಿದಾಗ ಸಿಕ್ಕುವುದು ಶಾಪಗಳು!**
**ಕೋರಿಕೊಳ್ಳದೇ ಕೊಡಲ್ಪಡುವುದು ವರಗಳು!!"**

**ಮುರಳಿ:** 'ಸಾರ್ ಇನ್ನೂ ಸ್ವಲ್ಪ ವಿವರವಾಗಿ ತಿಳಿಸಿ!'

**ಪತ್ರೀಜಿ:** "ಕಠೋರವಾಗಿ ತಪಸ್ಸು ಮಾಡಿ ಶಿವನಿಂದ ವರವನ್ನು ಬೇಡಿದ, ವರವನ್ನು ಹೊಂದಿದ ಭಸ್ಮಾಸುರನಿಗೆ ತಾನು ಕೇಳಿಕೊಂಡ ವರವೇ ಶಾಪವಾಗಿ ಹೋಯ್ತು. ತನ್ನ ನಾಶಕ್ಕೆ ತಾನೇ ದಾರಿ ಮಾಡಿಕೊಂಡ. ಆದುದರಿಂದ, ಕೇಳಿಕೊಂಡರೆ ಬರುವುದು ವರವಲ್ಲ... ಶಾಪಗಳು!"

"ನಚಿಕೇತನು ಯಮಧರ್ಮರಾಜನ ಬಳಿ ಹೋಗಿ 'ಮರಣದ ತರುವಾಯ ಜೀವನ' ಕುರಿತು ಪ್ರಶ್ನೆ ಮಾಡಿದನು. ನಚಿಕೇತನ ಸಹನಾ ಶೀಲತೆಗೆ ವಿನಯ ಸಂಪನ್ನತೆಗೆ ಆಶ್ಚರ್ಯಪಟ್ಟು, ಆ ಪ್ರಶ್ನೆಗೆ ಆನಂದ ಪಟ್ಟು ಯಮಧರ್ಮರಾಯನೇ ಸ್ವತಃ ನಚಿಕೇತನನ್ನು ಮೂರು ವರಗಳನ್ನು ಕೇಳಿಕೊ ಎಂದನು". ಆಗ ನಚಿಕೇತನು "ನನಗೆ ವರಗಳು ಬೇಡ, ನಾನು ಕೇಳಿರುವುದಕ್ಕೆ ಉತ್ತರ ಬೇಕಾಗಿದೆ" ಎಂದನು. ಯಮಧರ್ಮರಾಯನು ಆ ಪ್ರಶ್ನೆಗೆ ಉತ್ತರ ಕೊಡುವುದು, ಅನಂತರ, ನಚಿಕೇತನು ಕೇಳದೆಯೇ ವರಗಳನ್ನು ಕೊಡುವುದು ಕೂಡ ನಡೆಯಿತು.

ಆದ್ದರಿಂದ, ನಮ್ಮ ಪ್ರಯತ್ನಕ್ಕೆ ಬೇಕಾದ **Technology**ಯನ್ನು ತಿಳಿದುಕೊಂಡು ಆ ಕೆಲಸವನ್ನು ಸಿದ್ಧಿಸಿಕೊಳ್ಳುವುದೇ ವರಗಳನ್ನು ಹೊಂದುವುದು. ಈ ತರಹದ ವರಗಳು



ಯಾವಾಗಲೂ ಶಾಂತಿಯನ್ನೂ, ಜ್ಞಾನವನ್ನೂ ಕೊಡುತ್ತದೆ.

ಪಿರಮಿಡ್ ಮಾಸ್ಟರ್‌ಗಳು ಯಾವಾಗಲೂ ಸಹ "ಕೋರಿಕೆ ನೆರವೇರಿಸಿ ಕೊಡಿ" ಎಂದು ಮತ್ತೊಬ್ಬರನ್ನು ಆಧಾರ ಪಡಬೇಕಾಗಿಲ್ಲ, ಶಾಪಗಳಿಗೂ ಸಹ ಹೆದರುವವರಲ್ಲ ಅವರು, ಕಾರ್ಯ - ಕಾರಣ ಸಂಬಂಧ ಶಾಸ್ತ್ರವನ್ನು ಕುರಿತು ಮಾತ್ರವೇ ಆಸಕ್ತಿ ವಹಿಸುತ್ತಾರೆ. ಅಂದರೆ, ಕಲಿತುಕೊಳ್ಳುವುದಕ್ಕೋಸ್ಕರವೇ ಪ್ರಶ್ನೆಗಳನ್ನು ಹುಡುಕುತ್ತಾರೆ ಅಷ್ಟೇ ಹೊರತು, ಪ್ರಾಪಂಚಿಕ, ಆಧ್ಯಾತ್ಮಿಕ ಕೋರಿಕೆಯನ್ನು ಕೋರುವುದಿಲ್ಲ. ಉದಾಹರಣೆಗೆ "ನನಗೆ ಕ್ಯಾನ್ಸರ್ ವಾಸಿಮಾಡಿ" ಎಂದು ಕೇಳುವುದಿಲ್ಲ, ನನಗೆ ಏಕೆ ಕ್ಯಾನ್ಸರ್ ಬಂದಿದೆ? ಹೇಳಿ ಎಂದು ಪ್ರಶ್ನೆಗಳನ್ನು ಮಾಡುತ್ತಾರೆ. ಆಗ ಅದರ ಬಗ್ಗೆ ಹೇಳಬೇಕಾಗುತ್ತದೆ, ಆಗ ಕಾರಣವು ಅವಗಾಹನೆಗೆ ಬಂದು ಸಮಸ್ಯೆ ಪರಿಹಾರ ದೊರೆಯಲು ಪ್ರಾರಂಭವಾಗುತ್ತದೆ. ಪ್ರಶ್ನೆ ಹಾಕು ಎನ್ನುವುದು ಕೋರಿಕೆಯನ್ನು ಕೋರುವುದಕ್ಕಲ್ಲ.

**- ಟಿ. ಮುರಳೀಧರ್, ಗುಂತಕಲ್ಲು**

**ಕನ್ನಡಕ್ಕೆ: ತುಲಸಿ .ಕೆ.ಮೂರ್ತಿ**

# ಆಧ್ಯಾತ್ಮಿಕ ಕ್ರಾಂತಿಯ ಮೂಲಕ ಭೂಮಿಯ ವಿಕಾಸ

ಆಧ್ಯಾತ್ಮಿಕ ವಿಜ್ಞಾನಿಗಳ ಎರಡನೆಯ ಜಾಗತಿಕ ಸಮ್ಮೇಳನವು ಅಕ್ಟೋಬರ್ ತಿಂಗಳಿನಲ್ಲಿ ನಡೆಯಿತು. ಹಿಂದಿನ ಬಾರಿ ಡಿಸೆಂಬರ್ 2008 ರಂದು ಇದೇ ರೀತಿಯ ಸಮ್ಮೇಳನ ಹಮ್ಮಿಕೊಳ್ಳಲಾಗಿತ್ತು. ಈ ಬಾರಿ ಅಕ್ಟೋಬರ್ 2ರಿಂದ 5ರ ವರೆಗೆ ನಡೆದ ಈ ಸಮ್ಮೇಳನದ ಧ್ಯೇಯವಾಕ್ಯವು "Earth Evolution through Spiritual Revolution" ಎಂಬುದಾಗಿತ್ತು. ಇದರನ್ವಯ ಪಂಡಿತರು, ಪಾಮರರು, ವಿಜ್ಞಾನಿಗಳು ಸಾಮಾನ್ಯರು ಎಲ್ಲರೂ ಒಂದಾಗಿ ನಮ್ಮ ಭೂಮಿಯ ಏಳಿಗೆಗಾಗಿ ವಿಚಾರಧಾರೆಯನ್ನು ಹರಿಸಿದರು. ಈ ಸಮ್ಮೇಳನ ಬೆಂಗಳೂರಿನ ಪಿರಮಿಡ್ ವ್ಯಾಲಿಯಲ್ಲಿ ನಡೆಯಿತು. ಈ ಪಿರಮಿಡ್ ವ್ಯಾಲಿಯು ಬೆಂಗಳೂರಿನಿಂದ ದಕ್ಷಿಣಕ್ಕೆ 30km ದೂರದಲ್ಲಿದೆ. ಇದರ ಹೆಸರು "ಮೈತ್ರೇಯ ಬುದ್ಧ ಪಿರಮಿಡ್", ವಿಶ್ವದ ಅತಿ ದೊಡ್ಡ ನೂತನ ಯುಗದ ಪಿರಮಿಡ್ ಇದಾಗಿದ್ದು ಧ್ಯಾನ ಸಾಧನೆಗಾಗಿಯೇ ಮುಡಿಪಾಗಿದೆ. ಈ ಪಿರಮಿಡ್ ಮಂದಿರದಲ್ಲಿ ಆಧ್ಯಾತ್ಮಿಕ ಸಂಭ್ರಮವೊಂದು ಜ್ಞಾನ ಪೂರಿತವಾಗಿ ವಿಜಯೋತ್ಸಾಹದಿಂದ ಮೊಳಗಿಬಂದಿತು. ಈ ಆಧ್ಯಾತ್ಮಿಕ



ಅನುಭವ ಮಾತುಗಳಿಗೆ ಎಟುಕದಿದ್ದರೂ, ಬರಹದ ಮುಖೇನ ಮುದ್ರಿತವಾಗಿಡಬೇಕೆಂಬ ಹಂಬಲ ಹೆಚ್ಚಾಗುತ್ತಿದೆ. ಎಲ್ಲರೂ ಈ ಅನುಭವವನ್ನು ಸವಿಯಬೇಕೆಂಬ ಆಸೆ.

GCSS ಎಂಬ ಸಂಸ್ಥೆ, ವಿಶ್ವದ ಎಲ್ಲ ಆಧ್ಯಾತ್ಮಿಕ ಗುರುಗಳಿಗೆ ನೆಚ್ಚಿನ ತಾಣವಾಗಿದೆ. ಇದರ ರಂಗದಲ್ಲಿ ಮಹನೀಯರು, ತಮ್ಮ ಕಲಿಕೆಯನ್ನು, ಅನುಭವಗಳನ್ನು ಹಂಚಿಕೊಂಡು, ಒಬ್ಬರನ್ನೊಬ್ಬರು ಅಭಿನಂದಿಸಿಕೊಳ್ಳುತ್ತಾ, ಪ್ರೋತ್ಸಾಹಿಸುತ್ತಾ, ಆಧ್ಯಾತ್ಮಿಕ ಏಳಿಗೆಯನ್ನು ಸಾಕಾರ ಮಾಡುತ್ತಿದ್ದಾರೆ. ಹೊಸದಾಗಿ ಪರಿವರ್ತನೆಯನ್ನು ಹೊಂದುತ್ತಿರುವ ನಮ್ಮ ಭೂಮಿಯನ್ನು ಆಧ್ಯಾತ್ಮೀಕರಿಸುವುದೇ GCSSನ ಮುಖ್ಯ ಉದ್ದೇಶವಾಗಿದೆ. 2012ರ ಹೊತ್ತಿಗೆ ನಮ್ಮ ಈ ಸುಂದರ ಪ್ರಕೃತಿಯ ಮಡಿಲಲ್ಲಿ ನಾವೆಲ್ಲರೂ "ವಸುಧೈವ ಕುಟುಂಬಕಂ" ಎನುವಂತೆ "ಅಮೃತಸ್ಯ ಪುತ್ರಃ" ಎಂಬ ಅಮರವಾಣಿಯನ್ನು ನನಸಾಗಿಸುವುದೇ GCSSನ ಮೊದಲ ಕರ್ತವ್ಯವಾಗಿದೆ. ಈ ಬಾರಿ ನಡೆದ ಆಧ್ಯಾತ್ಮಿಕ ಉತ್ಸವದಲ್ಲಿ ನೂತನ ಯುಗದ ದಾರ್ಶನಿಕರು ಪಾಲ್ಗೊಂಡು ಜ್ಞಾನದ ಔತಣವನ್ನು ಉಣಬಡಿಸಿದ್ದಾರೆ.

ಸುಮಾರು 300 ಮಂದಿ ಪ್ರತಿನಿಧಿಗಳು ಕಾರ್ಯಕ್ರಮಕ್ಕೆ ಒಂದು ದಿನದ ಮುಂಚೆಯೇ ಬರಲಾರಂಭಿಸಿದರು. ಮೊದಲೇ ಕಾಂತಿಯಿಂದಲೂ, ಶಕ್ತಿಯಿಂದಲೂ ತುಂಬಿರುವ ವ್ಯಾಲಿಯಲ್ಲಿ, ನಮ್ಮ ಘಟಾನುಘಟಿಗಳು ಸೇರಿದಾಗ ಇನ್ನೇನಾಗಬೇಕಿದೆ. ಚರ್ಚೆ, ನಗೆ, ಹಾಸ್ಯದಿಂದ ಸಭೆ ತುಂಬಿಹೋಯಿತು. ಸಭೆಯು ಅಕ್ಟೋಬರ್ 2 ರಂದು 10.00 ಗಂಟೆಗೆ ಆರಂಭವಾಯಿತು. ಬ್ರಹ್ಮರ್ಷಿ ಪತ್ರೀಜಿ ಅವರ ಕೊಳಲ ನಾದವು, ಧ್ಯಾನ ಸ್ಥಿತಿಯೊಂದಿಗೆ, ಎಲ್ಲರನ್ನೂ ಹೊಸ ಲೋಕಕ್ಕೆ ಕರೆದೊಯ್ಯಿತು. GCSS ಪ್ರೆಸಿಡೆಂಟ್ ಶ್ರೀಮತಿ ಜಸ್ಮುಹೀನ್ ಈ ಕಾರ್ಯಕ್ರಮದ ಉದ್ಘಾಟನೆ ಮಾಡಿದರು. ಇವರು ಮೂಲತಃ




ಆಸ್ಟ್ರೇಲಿಯದವರು. ಅಪಾರ ಜ್ಞಾನ ಸಂಪನ್ನರು. ಇವರ ವಿಶೇಷತೆಯೆಂದರೆ, "Inter-Dimensional Field Science", ಇವರ ಇನ್ನೊಂದು ಕ್ಷೇತ್ರವೆಂದರೆ, "Pranic Nourishment." ಅಂದರೆ, ನಮ್ಮ ಪ್ರಾಣಶಕ್ತಿಯನ್ನು ಇಮ್ಮಡಿಗೊಳಿಸುವುದು. ಗಾಂಧೀ ಜಯಂತಿ ಪ್ರಯುಕ್ತ ಮಹಾತ್ಮಾ ಗಾಂಧೀ ಯವರ ಭಾವಚಿತ್ರಕ್ಕೆ ಹೂವಿನ ಹಾರವನ್ನು ಸಮರ್ಪಿಸಲಾಯಿತು. ಅಂದು ಉಪಸ್ಥಿತರಿದ್ದ ಗಣ್ಯರಲ್ಲಿ Times of India Groupನ ಶ್ರೀಮತಿ ಇಂದುಜೈನ್, Life Research Academy, Hyderabad ಇದರ ಸಂಸ್ಥಾಪಕ ಡಾ. ನ್ಯೂಟನ್ ಕೊಂಡವೀಟಿ Federation of Damanhur, Italy ಯಿಂದ ಎಸ್ಪೆರೆಡ್ ಅನನಸ್, ಅಮೇರಿಕದಿಂದ ಎರಿಕ್ ಬರ್ಗ್ಲಂಡ್ ಹಾಗೂ ಶ್ರೀಮತಿ ರಾಶಾ ಇವರು ಉದ್ಘಾಟನಾ ಜ್ಯೋತಿಯನ್ನು ಬೆಳಗಿದರು.

"ಯಾ-ಫಾಟಾ" ಎಂಬ ವ್ಯಾಯಾಮವನ್ನು ಎರಿಕ್ ಎಲ್ಲರಿಂದಲೂ ಮಾಡಿಸಿದರು. ಇದರಿಂದ ಹೃದಯವು ತೆರೆದುಕೊಳ್ಳುತ್ತದೆ. ಈ ವ್ಯಾಯಾಮವು ಅರಬ್ಬಿ ಅರ್‌ಮೈಕ್ ಹಾಗೂ ಹೀಬ್ರೂ ಭಾಷೆಗಳಿಂದ ನಿರ್ಮಿಸಲ್ಪಟ್ಟು, ಈ ಪದವನ್ನು ಜೋರಾಗಿ ಹೇಳುವಾಗ ಕೈಗಳನ್ನು ಹೃದಯದ ಮೇಲೆ ಇಟ್ಟು ಕೈಯನ್ನು ಹೊರಭಾಗಕ್ಕೆ ತೆರೆಯುವಾಗ, ನೋಡುಗರಿಗೆ ನಗು ಬರಿಸುತ್ತದೆ. ಆದಾದ ನಂತರ, ಎರಿಕ್ ಒಂದು ಸುಂದರ ಮಂತ್ರವನ್ನು ಹೇಳಿಕೊಟ್ಟರು. "ನನ್ನ ಪ್ರೀತಿಯನ್ನು ನಿನಗೆ ನೀಡುತ್ತೇನೆ. ನನ್ನ ಹೃದಯವನ್ನು ನಿನಗೆ ನೀಡುತ್ತೇನೆ. ನಿನ್ನ ಪ್ರೀತಿಯನ್ನು ಪಡೆಯುತ್ತೇನೆ. ನಿನ್ನ ಹೃದಯವನ್ನು ನಿನಗೆ ನೀಡುತ್ತೇನೆ. ನಿನ್ನ ಪ್ರೀತಿಯನ್ನು ಪಡೆಯುತ್ತೇನೆ. ನಿನ್ನ ಹೃದಯವನ್ನು ಪಡೆಯುತ್ತೇನೆ."

ಪತ್ರೀಜಿಯವರು ಮಾತನಾಡುವಾಗ, ತಮ್ಮ ಕನಸನ್ನು ಎಲ್ಲರಿಗೂ ವಿವರಿಸಿ ಹೇಳಿದರು. ಅವರು ಮೊದಲಿಗೆ, ಅತಿದೊಡ್ಡ ಪಿರಮಿಡ್ ಧ್ಯಾನ ಮಂದಿರವನ್ನು ನೋಡಬೇಕೆಂದು ಬಯಸಿದ್ದರು. 1999ರಲ್ಲಿ ಕಂಡ ಅವರ ಆ ಕನಸು ಈಗ ನನಸಾಗಿದೆ. ವೈಯಕ್ತಿಕವಾಗಿ ಪತ್ರೀಜಿಯವರ ಆಸೆ ಏನೆಂದರೆ, ಭೂಮಿಯ ಮೇಲೆ ಪ್ರತಿಯೊಬ್ಬ ವ್ಯಕ್ತಿಯೂ ಆತ್ಮಜ್ಞಾನಿ, ಅಂದರೆ, ಆಧ್ಯಾತ್ಮಿಕ ವಿಜ್ಞಾನಿಯಾಗಬೇಕೆಂಬುದೇ ಆಗಿದೆ.

ಮಧ್ಯಾಹ್ನದ ಕಾರ್ಯಕ್ರಮವನ್ನು ಶ್ರೀಮತಿ ಜಸ್ಮುಹೀನ್ ನಡೆಸಿಕೊಟ್ಟರು. ಇವರು Soft Empowerment Academy, Cosmic Internet Academy ಹಾಗೂ The Embassy of peace ಎಂಬ ಸಂಘ ಸಂಸ್ಥೆಗಳ ಸ್ಥಾಪಕರು. ಆದಾದ ನಂತರ, ಎರಿಕ್‌ರವರು ಹಾರ್ಪ್‌ವಾದ್ಯವನ್ನು ನುಡಿಸಿದರು. ಈ ತಂತಿ ವಾದ್ಯದ ಸಂಗೀತದಿಂದ ಹೃದಯದ ಚಕ್ರ, ಅಂದರೆ, ಅನಾಹತ ಚಕ್ರವು ತೆರೆದುಕೊಳ್ಳುತ್ತದೆ ಎಂದರು.





ಶ್ರೀಮತಿ ಜಸ್ಮುಹೀನ್ ಸ್ವಾತಂತ್ರ್ಯದ ವಿಚಾರವಾಗಿ ಮಾತನಾಡಿದರು. ಹಸಿವಿನಿಂದ ಮುಕ್ತಿಯ ಬಗೆಗೆ ಹೇಳುತ್ತಾ, ಹಲವು ಬಗೆಯ ಹಸಿವಿನ ಬಗ್ಗೆ ಹೇಳಿದರು. ಊಟದ ಹಸಿವು, ಭಾವನೆಗಳ ಹಸಿವು, ಜ್ಞಾನದ ಹಸಿವು ಹಾಗೂ ಆಧ್ಯಾತ್ಮಿಕ ಹಸಿವು ಎಂಬುದಾಗಿ ಹಲವು ವಿಧಗಳು ಇವೆ. ಈ ಹಸಿವುಗಳಿಂದ ಮುಕ್ತಿ ಹೊಂದಬೇಕಾದರೆ, ನಮ್ಮ ಅಸ್ತಿತ್ವದ ಮೇಲೆ ಗಮನವಿಡಬೇಕು.

ಆಕೆ ಎಲ್ಲರನ್ನೂ ಕುರಿತು "ಅರ್ಥ ಮಾಡಿಕೊಳ್ಳುವ ಪ್ರಯತ್ನವನ್ನು ನಿಲ್ಲಿಸಿ ತಮ್ಮ ಇರುವಿಕೆಯನ್ನು ಒಪ್ಪಿಕೊಳ್ಳಬೇಕಾಗಿದೆ" ಎಂದು ಹೇಳಿದರು. ಇಡೀ ಮನುಕುಲವು ಈ ರೀತಿಯಾದ ವಿಕಸನ ಮಾರ್ಗದಲ್ಲೇ ಚಲಿಸಬೇಕೆಂದು ಸ್ಪಷ್ಟಪಡಿಸಿದರು.

ಆಕೆಯ ಸಂದೇಶದ ತಿರುಳು ನಿಮ್ಮ ಹೃದಯದಲ್ಲಿ ಕೇಂದ್ರೀಕರಿಸಿಕೊಂಡು ನಿಮಗೇನು ಬೇಕಾಗಿದೆ, ನೀವು ನಮ್ಮ ಭೂಗ್ರಹಕ್ಕೆ ಏನು ನೀಡಬೇಕೆಂದು ಬಯಸುತ್ತೀರಿ ಎಂಬುದರ ಬಗ್ಗೆ ಸ್ಪಷ್ಟಪಡಿಸಿಕೊಳ್ಳಿ, ಆತ್ಮ ಪರಮಾತ್ಮರ ಮಿಲನಕ್ಕೆ ಸಾಕ್ಷಿಯಾಗೋಣ ಬನ್ನಿ. ಇಂದಿನಿಂದ ಸ್ವಯಂ-ಸಂರಕ್ಷಣೆಯ ಗುಣ ಹೊಂದಿರುವ ಪ್ರಾಣ ಶಕ್ತಿಯನ್ನು ಅವಲಂಬಿಸಿ ಬಾಳೋಣ. ಈ ಕ್ಷಣದಿಂದ ತಿನ್ನುವ ವಿಷಯದಲ್ಲೂ ಕೂಡಾ ಸಂತೋಷಕ್ಕಾಗಿಯೆ ಹೊರತು, ಅವಶ್ಯಕತೆಗಾಗಿ ತಿನ್ನಬಾರದು. ನಿಮ್ಮ ಆಲೋಚನೆಯ ರೀತಿಯನ್ನು ಬದಲಾಯಿಸಬೇಕಾಗಿದೆ. ನಿಮ್ಮ ಭಾವನೆಯು ಹೊಸ ರೂಪ ಪಡೆಯಬೇಕು. ನಿಮ್ಮ ಅಸ್ತಿತ್ವಕ್ಕೆ ನೀವೇ ಮಾಲೀಕರಾಗಬೇಕು. ನಿಮ್ಮ Energy Mixನಲ್ಲಿ ಬದಲಾವಣೆ ಆಗಬೇಕು. ನಿಮ್ಮಿಂದ ಕಾಂತಿಯು ಹೊರಹೊಮ್ಮಬೇಕು, ಇದಕ್ಕಾಗಿ ನಿಮ್ಮನ್ನು ನೀವೇ ಪರಿಶೀಲಿಸಿಕೊಳ್ಳಬೇಕು, ನಿಮ್ಮ ಇರುವಿಕೆಯ (Frequency) ಪುನರಾವರ್ತನೆಯನ್ನು ನೀವು ಬಲ್ಲವರಾಗಬೇಕು. ಸುಮ್ಮನೆ ಧ್ಯಾನ ಮಾಡಬೇಡಿರಿ, ನಿಮ್ಮ ಭೌತಿಕತೆಯನ್ನು ಹಾಗೂ

ಆಧ್ಯಾತ್ಮಿಕತೆಯನ್ನು ಬೇರೆ ಬೇರೆ ಎಂದು ತಿಳಿಯಕೂಡದು. ನಿಮ್ಮ ಬಾಳಿನ ಪ್ರತಿ ಹೆಜ್ಜೆಯಲ್ಲೂ ಆಧ್ಯಾತ್ಮಿಕತೆ ತುಂಬಿ ಹರಿಯಲು ಬಿಡಿ. ನಿಮ್ಮ ಆಯ್ಕೆಗಳನ್ನು ಸ್ವತಂತ್ರವಾಗಿ ಮಾಡಿಕೊಳ್ಳಿರಿ. ನೀವು ಪ್ರೇಮಪೂರಿತವಾಗಿ ಬಾಳಲು ಸಮರ್ಥರಾಗಿದ್ದೀರಿ ಎನ್ನುವುದನ್ನು ಸಾಬೀತು ಪಡಿಸಲು ಸಿದ್ಧರಿರುವಂತೆ ತೋರಬೇಕು ನಿಮ್ಮ ಆಯ್ಕೆಗಳು. ನಿರ್ಜನ ಪ್ರದೇಶಗಳಲ್ಲಿ ಧ್ಯಾನ ಮಾಡುವುದನ್ನು ಬಿಟ್ಟು ಜನರಿಂದ ತುಂಬಿ ತುಳುಕಾಡುವ ಪ್ರದೇಶಗಳಲ್ಲಿ ಧ್ಯಾನ ಮಾಡಿ. ನೀವು ಪ್ರೇಮಪೂರಿತವಾಗಿ ಹೆಚ್ಚು ಹೆಚ್ಚು ಕೆಲಸಮಾಡಿದಂತೆ, ನಿಮ್ಮಲ್ಲಿರುವ ಎಲ್ಲಾ ಬಗೆಯ ಹಸಿವುಗಳು ದೂರವಾಗುತ್ತವೆ. ನಿಮಗೆ ಬೇಕಾದ ಪೌಷ್ಟಿಕಾಂಶವು ದೈವೀ ಮೂಲಗಳಿಂದ ಬರುವಂತೆ ಸಂಕಲ್ಪ ಮಾಡಿರಿ. ಈ ನಿಮ್ಮ ಸಂಕಲ್ಪವನ್ನು ಬರೆದಿಟ್ಟು, ಈ ರೀತಿಯಾಗಿ ಪುನರುಚ್ಚರಿಸಬೇಕು; ಓ ದೇಹವೇ, ನಾನು ನಿನ್ನ ಬುದ್ಧಿಶಕ್ತಿಯನ್ನು ಅಭಿನಂದಿಸುತ್ತೇನೆ, ನಿನಗೆ ಬೇಕಾದ, ಸರಿಯೆನಿಸುವ ಪೌಷ್ಟಿಕಾಂಶವನ್ನು ಪಡೆಯುವಲ್ಲಿ ನೀನು ಸಮರ್ಥನಿದ್ದೀಯೆ, ಆ ನಿನ್ನ ನಿರ್ಧಾರವನ್ನು ನಾನು ಗೌರವಿಸುತ್ತೇನೆ.

ಆಕೆ ನಮಗೆ ಮೂರು ಮಂತ್ರಗಳನ್ನು ಕಲಿಸಿದರು. ಅದನ್ನು ಉಚ್ಛ್ವಾಸ -ನಿಶ್ವಾಸಗಳೊಂದಿಗೆ ಉಚ್ಚರಿಸಬೇಕು. "ನಾನೇ ಪ್ರೇಮ, ನಾನು ಅನಂತ, ನಾನು ಅಮರ." ಇದನ್ನು ಪ್ರೀತಿಯಿಂದ, ಶಾಂತಿ ಹಾಗೂ ಆನಂದದಿಂದ ಮಾಡಬೇಕು ಎಂದರು. ಆದಾದ ಮೇಲೆ, ನಮ್ಮ ಪ್ರಾಣಶಕ್ತಿಯ ಅರಿವು ಹಾಗೂ ಅದರ ಮಟ್ಟವನ್ನು ತಿಳಿದುಕೊಳ್ಳುವ ಬಗೆ ಹೇಳಿದರು.

ಜಸ್ಮುಹೀನ್‌ರವರು ಭಾರತೀಯರಿಗೆ ಒಂದು ವಿಶೇಷ ಸಂದೇಶವನ್ನು ತಂದಿದ್ದರು. ಭೂಮಿಯ ಕುಂಡಲಿನೀ ಶಕ್ತಿಯು ಜಾಗೃತಗೊಳ್ಳುತ್ತಿದೆ. ಭಾರತದಿಂದ ಇದು ದಕ್ಷಿಣ ಅಮೇರಿಕಾದ ಕಡೆ ಹರಿಯುತ್ತಿದೆ. ಯುಗ ಯುಗಗಳಿಂದಲೂ ಭಾರತೀಯರಿಗೆ ಅಪಾರವಾದ ಆಧ್ಯಾತ್ಮಿಕ ಜ್ಞಾನವಿತ್ತು. ಆದರೆ, ಅದರಿಂದ ನೀವೇನು ಮಾಡಿದಿರಿ. ನೀವು ದೈವೀ ಗುಣವುಳ್ಳವರೆಂದು, ಭಗವಂತನ ಪ್ರೇಮದ ಪ್ರತಿರೂಪವೇ ನೀವೆಂದು ಋಜುವಾತು ಮಾಡಬೇಕಾಗಿದೆ. ಅನಂತರ, ಎಲ್ಲರನ್ನೂ ಧ್ಯಾನಕ್ಕೆ ಸಿದ್ಧಪಡಿಸಿ, ಎರಿಕ್‌ರವರ ಹಾರ್ಪ್ ವಾದ್ಯದೊಂದಿಗೆ ಅವರ ಸರದಿಯನ್ನು ಮುಗಿಸಿಕೊಟ್ಟರು.

ಅಂದು ಸಂಜೆ ಶ್ರೀಶ್ರೀ ರವಿಶಂಕರ್ ಅವರು ಎಲ್ಲರನ್ನೂ ಉದ್ದೇಶಿಸಿ ಮಾತನಾಡಿದರು. "ದುಃಖ ಹಾಗೂ ನೋವು ಸದಾ ಇದ್ದೇ ಇರುವಂತೆ, ವಿಷಯಗಳು ಇದ್ದೇ ಇರುತ್ತವೆ. ಇದಕ್ಕೆ ಧ್ಯಾನವೊಂದೇ ಮಾರ್ಗ, ಧ್ಯಾನದಿಂದ ಮಾತ್ರ ನಮಗೆ ಮುಕ್ತಿ, ಪ್ರತಿಯೊಬ್ಬರು ಧ್ಯಾನ ಹಾಗೂ ಅಹಿಂಸೆಯನ್ನು ತಮ್ಮ ಮನೆಗಳಲ್ಲಿ ಪಾಲಿಸಬೇಕು ಎಂದರು. ತಮ್ಮ ವೈಜ್ಞಾನಿಕ ಹಾಗೂ ಆಧ್ಯಾತ್ಮಿಕ ನಿಲುವನ್ನು ಹೆಚ್ಚಿಸಿಕೊಳ್ಳಬೇಕು ಎಂದು ಹೇಳಿದರು".

ಅಕ್ಟೋಬರ್ 3ರಂದು ಬೆಳಿಗ್ಗೆ 6ಕ್ಕೆ ಪತ್ರೀಜಿಯವರು ತಮ್ಮ ವೇಣು ವಾದನದೊಂದಿಗೆ ಒಂದು ಘಂಟೆಯಕಾಲ ಎಲ್ಲರನ್ನೂ ಧ್ಯಾನ ಮಗ್ನರಾಗಿಸಿದರು.

9.00 ಘಂಟೆಗೆ ಸುಮಾರು ಅರ್ಧತಾಸು ಶ್ರೀಮತಿ ಜಸ್ಮುಹೀನ್‌ರವರು ಧ್ಯಾನ ಮಾಡಿಸಿದರು. ಆದಾದ ನಂತರ, ಡಾ. ನ್ಯೂಟನ್‌ರವರ "Seven Essence Mirrors" ಎಂಬ ಕಾರ್ಯಕ್ರಮ ನಡೆಯಿತು. ಅಂದರೆ, ನಮ್ಮಲ್ಲಿರುವ ಏಳು ವಿಧವಾದ ಮೂಲ ಸ್ವಭಾವಗಳಿಗೆ ಕನ್ನಡಿ ಹಿಡಿಯುವುದು ಅಥವಾ ಮೆಲುಕುಹಾಕುವುದು. ಅವೇನೆಂದರೆ;

1. Reflections of the moment: ಈ ಕ್ಷಣದಲ್ಲಿ ಚಿಂತನೆ ಮಾಡುತ್ತಿರುವ ವಿಚಾರ
2. Reflections of Judgment: ನಮ್ಮ ನಿರ್ಧಾರ/ನಿಲುವಿನ ಬಗ್ಗೆ ಪ್ರತಿಬಿಂಬಿಸುವುದು
3. Reflections of Loss: ನಷ್ಟಗಳ ಬಗ್ಗೆ ಅಭಿಪ್ರಾಯ ಅಥವಾ ಕಳೆದುಹೋದ
4. Reflections of most forgotten love: ಮರೆತು ಹೋದ ಪ್ರೇಮದ ಬಗ್ಗೆ ಚಿಂತನೆ
5. Reflections of father/mother / creator: ತಂದೆ/ತಾಯಿ/ ಸೃಷ್ಟಿಕರ್ತನು ಇವರು ನಮ್ಮ ಮೇಲೆ ಬೀರಿದ ಪ್ರಭಾವ
6. Reflections of quest into darkness: ನಮಗೆ ತಿಳಿಯದೆ ಇರುವ ವಿಷಯಗಳ ಬಗ್ಗೆ ನಮ್ಮ ಅಭಿಪ್ರಾಯ ಅಂದರೆ, ನಮಗೆ ಅರಿವಿಲ್ಲದ ವಿಚಾರಗಳ ಬಗ್ಗೆ ಚಿಂತನೆಯು ನಮ್ಮ ಮೇಲೆ ಬೀರಿದ ಪ್ರಭಾವ.
7. Reflections of greatest acts or compassion: ನಮ್ಮ ಬಾಳಿನಲ್ಲಿ ನಾವು ಮಾಡಿದ ಅತ್ಯದ್ಭುತವಾದ ಪುಣ್ಯದ ಕೆಲಸಗಳಿಂದ ನಮ್ಮಲ್ಲಿ ಉಂಟಾಗಿರುವ ಬದಲಾವಣೆ ಅಥವಾ ಪರಿಣಾಮ.

ಪ್ರತಿಯೊಂದು ಸನ್ನಿವೇಶವೂ ನಮ್ಮಲ್ಲಿ ಭಾವನೆಗಳನ್ನು ಚಿತ್ರಿಸಿ, ಅದನ್ನು ಪುನಃ ನಮ್ಮ ವ್ಯಕ್ತಿತ್ವದಲ್ಲಿ ಪ್ರತಿಬಿಂಬಿಸುತ್ತಿರುತ್ತವೆ. ಈ ತೆರನಾದ ಪ್ರತಿಬಿಂಬಗಳು ಆತ್ಮದಲ್ಲಿ ಕಂಪನಗಳನ್ನುಂಟುಮಾಡುತ್ತಾ, ಕೊನೆಗೆ ನಮ್ಮ

ಪರಿಸರದ ಮೇಲೆ ಪ್ರಭಾವ ಬೀರುತ್ತದೆ. ಈ ವಿಚಾರವು ಕೇಳುಗರ ಮನದಲ್ಲಿದ್ದ ಅನೇಕ ಸಂಶಯಗಳನ್ನು ದೂರಮಾಡಿತು.

ಒಟ್ಟಾರೆ, ''ಆಕರ್ಷಣೆಯ ನಿಯಮ'' (Law of attraction) ಬಗ್ಗೆ ಸವಿವರವಾಗಿ ತಿಳಿಸಿದರು ಡಾ.ನ್ಯೂಟನ್. ನಿಮ್ಮ ಆಲೋಚನೆಗಳನ್ನು ಸರಿಯಾಗಿ ಆಯ್ಕೆಮಾಡುವ ಜವಾಬ್ದಾರಿ ನಿಮ್ಮದೇ ಆಗಿದೆ. ನಿಮ್ಮ ಆಲೋಚನೆಗಳೇ ನಿಮ್ಮ ಸನ್ನಿವೇಶಗಳನ್ನು ಸೃಷ್ಟಿಸುತ್ತಿವೆ. ಇದೇ ಮೊದಲನೆಯ ಪ್ರತಿಬಿಂಬದ ಪರಿಣಾಮ. ನೀವು ಆಕರ್ಷಿಸಿದ ಪರಿಣಾಮಗಳಲ್ಲಿ ಜುಗುಪ್ಸೆ ತರುವ ಅನುಭವವು ಕೂಡ ನಿಮ್ಮ ವ್ಯಕ್ತಿತ್ವದ ಒಂದು ಭಾಗವೇ ಆಗಿದೆ. ಇದು ಎರಡನೆಯ ಹಂತದಲ್ಲಿ ಪ್ರಕಟವಾಗುತ್ತದೆ. ನಿಮ್ಮನ್ನು ಆಕರ್ಷಿಸುವ ಹಾಗೂ ಪ್ರೋತ್ಸಾಹಿಸುವ ವಿಚಾರಗಳು ಕೂಡಾ ನಿಮ್ಮ ವ್ಯಕ್ತಿತ್ವದ ಭಾಗವೇ ಹೌದು. ಇದು ಮೂರನೆಯ ಹಂತದಲ್ಲಿ ಕಾಣಿಸಿಕೊಳ್ಳುತ್ತದೆ. ನಾವು ಗಮನಿಸಿದರೆ, ನಮ್ಮ ಸಂಬಂಧಗಳಲ್ಲಿ ಯಾವು ವಿಶೇಷತೆಯು ಇರುವುದಿಲ್ಲ, ಸಂಬಂಧಗಳಲ್ಲಿ ಸಹಜವಾಗಿವೇ ಸ್ಥಾನಮಾನ, ಮನ್ನಣೆ ಸಿಗುವುದಿಲ್ಲ. ಅತ್ತುಕರೆದು ಔತಣ ಎಂಬಂತೆ, ಆಯಾ ಸಂಬಂಧಕ್ಕೆ ಬೇಕಾದ ಭಾವನೆಯನ್ನು ಬೇಡಿ ಬೇಡಿ ಪಡೆಯಬೇಕು. ಇದನ್ನು Beggar Relationship ಎನ್ನುತ್ತಾರೆ. ಒಬ್ಬ ಭಿಕ್ಷುಕ ಇನ್ನೊಬ್ಬ ಭಿಕ್ಷುಕನಿಂದ ಏನು ಪಡೆಯಬಲ್ಲನು. ಬಹಳಷ್ಟು ಪ್ರೇಮದ ಸಂಬಂಧಗಳಲ್ಲಿ ಮಾತ್ರ ಅಭಿನಂದನೆಯ, ಮೆಚ್ಚುಗೆಯ ಭಾವನೆ ತುಂಬಿರುತ್ತದೆ. ಈ ವಿಶ್ವವು ನಮ್ಮ ಆಯ್ಕೆಗಳ (Choice) ಆಧಾರದ ಮೇಲೆ ನಿಂತಿರುವ ತಾಣ. ನಮ್ಮ ಆಯ್ಕೆಗಳನ್ನು ಜಾಗರೂಕತೆಯಿಂದ ಮಾಡಬೇಕಾದ ಜಬಾಬ್ದಾರಿಯು ನಮ್ಮದೇ. ಏಕೆಂದರೆ, ಪ್ರತಿಯೊಂದು ಆಯ್ಕೆಯಿಂದ ಉಂಟಾಗುವ ಅನುಭವವು ನಮ್ಮಲ್ಲಿ ಕೆಲವು ಭಾವನೆಗಳು ಮುದ್ರಿತವಾಗುತ್ತವೆ, ಅಂದರೆ, ಸೋಲಿನ ಭಾವನೆ, ಕೀಳರಿಮೆ, ವಿಜಯೋತ್ಸಾಹದ ಭಾವನೆ, ಅಹಂಕಾರದ ಭಾವನೆ, ಓಡಿ ಹೋಗಬೇಕೆಂದೆನಿಸುವ ಭಾವನೆ, ಬಲಿಪಶುವಿನ ಭಾವನೆ, ಸೇಡಿನ ಮನೋಭಾವನೆ ಇತ್ಯಾದಿ ಇತ್ಯಾದಿ. ಈ ಅನುಭವಗಳು ನಮ್ಮ ಬಾಳಿನಲ್ಲಿ ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತಲೇ ಇರುತ್ತವೆ. ನಮ್ಮ ಆಯ್ಕೆಗಳಲ್ಲಿ ಬದಲಾವಣೆ ತರುವವರೆಗೂ ಜೀವನದಲ್ಲಿ ಹೊಸತನವನ್ನು ನೋಡಲಾಗುವುದಿಲ್ಲ, ಇತರರನ್ನು ಉನ್ನತ ಮಟ್ಟದಲ್ಲಿ ಅಭಿನಂದಿಸಿ, ನಮ್ಮನ್ನು ನಾವೇ ಕೀಳಾಗಿ ನೋಡಿಕೊಳ್ಳುವುದರಿಂದ ಸೋಲುಂಟಾಗುತ್ತದೆ. ಮೊದಲು ನಮ್ಮನ್ನು ನಾವೇ ಒಪ್ಪಿಕೊಂಡು, ಗೌರವಿಸಿ, ಅಭಿನಂದಿಸಿಕೊಳ್ಳಬೇಕು. ಇದೇ ನಾವು ಮಾಡಬೇಕಾದ ಪುಣ್ಯದ ಕೆಲಸ. ನಮ್ಮನ್ನು ನಾವೇ ಪ್ರೀತಿಸಿಕೊಳ್ಳುವುದೇ ನಾವು ತಕ್ಷಣಕ್ಕೆ ಮಾಡಬೇಕಾದ ಕರ್ತವ್ಯ.

ಅಂದು ಮಧ್ಯಾಹ್ನ ಸ್ವಾಮಿ ನಿರ್ಮಲಾನಂದರು ಸ್ನೇಹವೇ ಅತಿ ಪವಿತ್ರವಾದ ಸಂಬಂಧ ಎಂಬುದಾಗಿ ವಿವರಿಸಿದರು. ಮೈತ್ರೇಯ ಬುದ್ಧತತ್ವವನ್ನು ಸಾಧಿಸಿದರೆ ಎಲ್ಲರೂ ನಮಗೆ ಸ್ನೇಹಿತರು ಎಂದರು.

ಅಂದು **2.30**ಕ್ಕೆ ಶ್ರೀಮತಿ ಜಸ್ಮಹೀನ್ ''Shifting of the Ages: 2012 and beyond'' ಎಂಬ ವಿಚಾರದ ಬಗ್ಗೆ ಕಾರ್ಯಕ್ರಮ ನಡೆಸಿಕೊಟ್ಟರು. ಯುಗದ ಬದಲಾವಣೆ ಮತ್ತು **2012** ನಂತರದ ಜೀವನದ ಬಗ್ಗೆ ಮಾತನಾಡಿದರು. ಅತ್ಯಮೂಲ್ಯವಾದ ವಿಷಯವೇನೆಂದರೆ, ನಮ್ಮ ಭೌತಿಕ ಶರೀರವು ಒಂದು ಅದ್ಭುತವಾದ ವರ.

ಈ ಕಾರ್ಯಕ್ರಮದ ಮುಖ್ಯಾಂಶಗಳು ''ನಾವೇ ಈ ಯುಗದ ಬದಲಾವಣೆಯನ್ನು ನಿಯಂತ್ರಿಸುವ ಹೊಣೆಯನ್ನು ಹೊರಬೇಕು, ಅದು ನಮ್ಮ ಕೈಯಲ್ಲೇ ಇದೆ. ನಮ್ಮ ಭೌತಿಕ ಕಾಯವು ಒಂದು ಅದ್ಭುತ ವ್ಯವಸ್ಥೆ. ಇದರ ಮೂಲಕ ನಮ್ಮ ಭೂಗ್ರಹದ ಸ್ಥಿತಿ, ಪರಿಸರದ ಬಗ್ಗೆ ಮಾಹಿತಿ, ನಮ್ಮಿಂದ ಈ ಗ್ರಹಕ್ಕೆ ಆಗುತ್ತಿರುವ ಪರಿಣಾಮಗಳು ಇತ್ಯಾದಿಯನ್ನು ತಿಳಿದುಕೊಳ್ಳಬಹುದು. ನಮ್ಮಿಂದ ಹೊರಬರುವ ಶಕ್ತಿಯ ಕಿರಣಗಳ ಬಗ್ಗೆ ಗಮನವಿಡಬೇಕಾಗಿದೆ.

ನಮ್ಮ ಶಕ್ತಿ ತರಂಗಗಳಲ್ಲಿ ಪವಿತ್ರವಾದ ಭಾವನೆ, ಕನಿಕರ ಹಾಗೂ ಸೇವಾಭಾವನೆಯನ್ನು ತುಂಬಿಸಿ ಹರಿಸುವ ಹೊಣೆಗಾರಿಕೆ ನಮಗಿದೆ. ನಮ್ಮ ಅಂತರಂಗದಲ್ಲಿ ಇಂತಹ ಪವಿತ್ರವಾದ ಬೆಳಕಿನಿಂದ ನಮ್ಮ ವ್ಯಕ್ತಿತ್ವವನ್ನು ಪುನರ್ನಿರ್ಮಾಣ ಮಾಡಬೇಕು. ಆತ್ಮಗಳು ಆತ್ಮಗಳೊಡನೆ ಮಾತನಾಡುವ ಕಲೆಯನ್ನು ರೂಢಿಸಿಕೊಳ್ಳಬೇಕು.

ವಿಜಯಕ್ಕೆ ಮೂರು ಮಂತ್ರಗಳು; ನಿಮಗಾಗಿ ಗೆಲುವು, ಇತರರಿಗಾಗಿ ಗೆಲುವು ಹಾಗೂ ನಮ್ಮ ಭೂಗ್ರಹಕ್ಕೆ ಗೆಲುವು. ಒಮ್ಮೆ ಮನಸ್ಸಿಗೆ ಬಲು ದೊಡ್ಡ ವಿಚಾರವು ಗೋಚರಿಸಿದ ಮೇಲೆ ಅದು ಮತ್ತೆ ತನ್ನ ಹಿಂದಿನ ಹಂತಕ್ಕೆ ಹೋಗಲಾರದು. ನಿಮ್ಮ ಕನಸುಗಳಲ್ಲಿ ನಂಬಿಕೆಯಿಟ್ಟು ಅದನ್ನು ಸಾಕಾರಗೊಳಿಸಿರಿ, ಅಂತರ್ಮುಖಿಯಾಗಿರಿ, ಒಳಗಿರುವ ಅನೇಕಾನೇಕ ಲೋಕಗಳನ್ನು, ಜೀವ ರಾಶಿಗಳನ್ನು ವೀಕ್ಷಿಸಿರಿ. ನಿಮ್ಮ ಅಂತರ್ಗತ ಪ್ರಪಂಚವು ಸದಾ ಪ್ರೇಮ, ಶಾಂತಿ, ಜ್ಞಾನದಿಂದ ತುಂಬಿದೆ. ಅದು ಬಹುಮುಖಿ ಪ್ರತಿಭೆಯನ್ನು ಬಿಂಬಿಸುತ್ತಿದೆ. ನಿಮ್ಮ ಪ್ರತಿಭೆಯನ್ನು ಧ್ಯಾನದ ಮೂಲಕ ತಿಳಿದುಕೊಳ್ಳಿ. ನಿಮ್ಮ ಅಂತರ್ ಪ್ರಪಂಚದ ಮೂಲಕ ನಿಮ್ಮ ಎಲ್ಲೆಗಳನ್ನು ಮೀರಿ, ಸಹಜವಾದ ಬಹುಮುಖಿ ವಿಸ್ತೀರ್ಣವನ್ನು ಬೆಳೆಸಿಕೊಳ್ಳಿ, ಅದಕ್ಕಾಗಿ ನೀವು ಎಲ್ಲೋ ಹುಡುಕುವ ಅಗತ್ಯವಿಲ್ಲ,

ನಿಮಗೆ ಬೇಕಾದಾಗ, ಇದ್ದಲ್ಲಿಯೇ ಸಿಗುತ್ತದೆ. ಒಂದು ಮಾತನ್ನೂ ಆಡದೆ ಅನೇಕ ಮಂದಿಯನ್ನು ಪ್ರಭಾವಿತಗೊಳಿಸುವುದು, ಭೂಮಿಯಂತೆಯೆ ಸುಮಾರು **80,000** ಗ್ರಹಗಳಿವೆ. ನಿಮ್ಮ ಅನುಮಾನಗಳನ್ನು, ಪ್ರಶ್ನೆಗಳನ್ನು ಬದಿಗಿಟ್ಟು ಪ್ರೇಮವೆಂಬ ಕ್ಷೇತ್ರಕ್ಕೆ ಕಾಲಿಡಿ. ಆಕೆ ನಮ್ಮೆಲ್ಲರಿಗೂ ಒಂದು ಪ್ರಯೋಗವನ್ನು ಹೇಳಿಕೊಟ್ಟರು.

ಸಾಯಂಕಾಲ 5.30ಕ್ಕೆ ಡಾ.ಜಯೇಶ್ "Transformation is a Journey within" ಅಂದರೆ, "ಪರಿವರ್ತನೆ ಒಂದು ಆಂತರಿಕ ಪ್ರಯಾಣ" ಎಂಬುದರ ಬಗ್ಗೆ ಸಂಶೋಧನೆಯನ್ನು ಹಂಚಿಕೊಂಡರು. ಅವರು ಮುಂಬೈನ ಹೋಮಿಯೋಪತಿ ಡಾಕ್ಟರ್. ನಂಬಿಕೆ, ಭಾವನೆ ಹಾಗೂ ದೈವೀ ಪ್ರಭಾವ ಆಧಾರಿತ ವೈದ್ಯವನ್ನು ನೀಡುತ್ತಾರೆ. ಅವರ ಪ್ರಕಾರ ಖಾಯಿಲೆಗಳಿಗೆ ಕಾರಣವನ್ನು ತಿಳಿದುಕೊಳ್ಳೋಣ. ಶಕ್ತಿಯ ಹರಿವಿನಲ್ಲಿ ತೊಡಕುಂಟಾದಾಗ, ಅದನ್ನು ಖಾಯಿಲೆ ಎನ್ನುತ್ತೇವೆ. ನಮ್ಮ ಊಹೆಗೆ ಎಟುಕದ ಬೇರೆಯೆ ಪ್ರಜ್ಞಾ ಕ್ಷೇತ್ರದಲ್ಲಿ, ಕಾಲ ಹಾಗೂ ಅವಧಿಗೆ ಅತೀತವಾದ ಕೆಲವು ಪ್ರಭಾವಗಳಿಂದ ಕೆಲವು ಬಹುಮುಖ ವಿಸ್ತೀರ್ಣಾತ್ಮಕ ಬದಲಾವಣೆಗಳನ್ನು ಖಾಯಿಲೆ ಎನ್ನುತ್ತೇವೆ. ರೋಗಿಯ ಹಾಗೂ ವೈದ್ಯನ ಜ್ಞಾನಕ್ಕನುಗುಣವಾಗಿ ಖಾಯಿಲೆಯನ್ನು ಗುಣಪಡಿಸಬಹುದು.

ಹೋಮಿಯೋಪತಿಯು ಕೆಲಸ ಮಾಡುವ ವಿಧಾನವನ್ನು ತಿಳಿಸಿದರು. ಇದನ್ನು ನಿರೂಪಿಸಲು ಓರ್ವ ವಯೋವೃದ್ಧ ಮಹಿಳೆಯನ್ನು ಕರೆಸಲಾಯಿತ್ತು. ಆಕೆ ಕುಲ್ಲು ಎಂಬ ಊರಿನ ನಿವಾಸಿ. ಆಕೆಗೆ ಮಾಂಸಖಂಡಗಳ ಬಲಹೀನತೆ ಹಾಗೂ ಕೀಲುನೋವಿನ ಬಾಧೆ. ಚಕ್ರದ ಕುರ್ಚಿಯಲ್ಲಿ ಬಂದ ಆಕೆ ನಂತರ, ಊರುಗೋಲುಗಳ ಆಧಾರ ಪಡೆದು ಮೆಲ್ಲಗೆ ನಡೆದ ಬಂದರು. ಕೆಲವು ಸರಳ ಪ್ರಶ್ನೆಗಳ ಮೂಲಕ ಡಾ.ಯೋಗೀಶ್ ಆಕೆಯನ್ನು ಬೇರೆ ಪ್ರಜ್ಞಾಕ್ಷೇತ್ರಕ್ಕೆ ತೆರಳುವಂತೆ ಮಾಡಿ, ತನ್ನ ಖಾಯಿಲೆಯನ್ನು ತಾನೇ ಗುಣಪಡಿಸಿಕೊಳ್ಳುವಂತೆ ಮಾಡಿದರು. ಆಕೆಯ ಕೀಲಿಗಳು ಮೊದಲು ಬಿಗಿಯಾಗಿದ್ದುವು. ಈಗ ಕ್ರಮೇಣ ಅವು ತೆರೆದುಕೊಂಡು ಸುಮಾರು 3 ತಾಸುಗಳಷ್ಟು ಆಕೆ ಯಾವು ಸಹಾಯವೂ ಇಲ್ಲದೆ ನಡೆಯುವುದನ್ನು ನೋಡಿದೆವು. ಮಹದಾಶ್ಚರ್ಯವಾಯಿತು. ಡಾ.ಜಯೇಶ್ ವಿವರಿಸಿದರು ಆಕೆಯ ತೊಂದರೆಗಳಿಗೆ "ಆಕೆಯ ಬಳಿಯೇ ಉತ್ತರಗಳೂ ಇವೆ" ನಾನು ಯಾವ ತಾರತಮ್ಯವೂ ಇಲ್ಲದೆ, ಕೇವಲ ಆ ಕೆಲಸಕ್ಕೆ ಅನುಕೂಲ ಮಾಡಿಕೊಡುತ್ತೇನೆ, ಅಷ್ಟೆ. ಬಹಳ ವಿಚಿತ್ರ ಹಾಗೂ ಅಪರೂಪದ ವಿಷಯಗಳನ್ನು ಗಮನಿಸುತ್ತಾ, ಆ ಜ್ಞಾನದಿಂದ ವೈಯಕ್ತಿಕ ಪರಿಹಾರವನ್ನು ಗೊತ್ತುಪಡಿಸುತ್ತೇನೆ. ಈ ಮಹಿಳೆಯ ವಿಷಯದಲ್ಲಿ ಆಕೆಗೆ ಬೇಕಾದ ಪರಿಹಾರವನ್ನು ಆಯ್ದುಕೊಡಲಾಯಿತು. ಏಳು ತಿಂಗಳು ಕಳೆದಿದೆ, ಆಕೆಯ ಚಿಕಿತ್ಸೆ ಶುರುವಾದಾಗಿನಿಂದ ಆಕೆ ದಿನೇ ದಿನೇ ಗುಣಮುಖವಾಗುತ್ತಲೇ ಇದ್ದಾರೆ, ಹೊರತು ಕುಗ್ಗಲೇ ಇಲ್ಲ.

ಈ ಅದ್ಭುತವಾದ ಪ್ರದರ್ಶನದ ನಂತರ, ಇನ್ನೊಂದು ದಿಗ್ಭ್ರಮೆಗೊಳಿಸುವ ಪ್ರದರ್ಶನ ಶ್ರೀ ಗುರುಪ್ರೀತ್‌ಸಿಂಗ್ ರವರಿಂದ ನಡೆಯಿತು. ಇವರು ದೆಹಲಿಯ ನಿವಾಸಿಗಳು. ಸೇನಾಪಡೆಯಿಂದ ನಿವೃತ್ತಿ ಹೊಂದಿದ ನಂತರ, "ಶಯನ್" ಸಂಶೋಧಕರಾಗಿದ್ದಾರೆ. ಶಮನ್ ವೃತ್ತಿಪರರಾಗಿ ಸಾಕಷ್ಟು ಸೇವೆ ಸಲ್ಲಿಸಿದ್ದಾರೆ. ಶಮನ್ ಎಂಬುವರು ಒಂದು ಪ್ರಪಂಚದಿಂದ ಇನ್ನೊಂದು ಪ್ರಪಂಚಗಳ ನಡುವೆ ನಡೆದಾಡುವವರು. ಆತ್ಮಶಕ್ತಿಯಲ್ಲಿ ಪೂರ್ತಿಯಾಗಿ ವಿಲೀನಗೊಂಡಾಗ, ಈ ಶಮನ್‌ಗಳಿಗೆ ಅಪಾರವಾದ ಶಕ್ತಿಸಾಮರ್ಥ್ಯಗಳು ಸಿದ್ಧಿಸುತ್ತವೆ. ಭಯವಿದ್ದಲ್ಲಿ ರೋಗ ರುಜಿನಗಳು, ಕ್ರಿಮಿಕೀಟಗಳು ಹಾಗೂ ದೆವ್ವಗಳು ಆವರಿಸಿಕೊಳ್ಳುತ್ತವೆ. ಈ ದೋಣಿಯನ್ನು ಅವರು RAGS ಎಂದು ಕರೆಯುತ್ತಾರೆ. Regret ಅಂದರೆ, ಪಶ್ಚಾತ್ತಾಪ ಪಡುವುದು ಅಥವಾ ತಪ್ಪು ಆಯ್ಕೆ/ನಿರ್ಧಾರ ಮಾಡಿದ ಮೇಲೆ ದುಃಖಿಸುವುದು. Angel ಅಂದರೆ ಕೋಪ. Guilt Syndrome ಪಾಪಭೀತಿ / ಪಾಪಪ್ರಜ್ಞೆ ಈ ಮೂರು ದೌರ್ಬಲ್ಯಗಳಿಂದ ನಮ್ಮ ಶಕ್ತಿ ಕ್ಷೇತ್ರವು ಕುಗ್ಗುತ್ತದೆ. ಈ ಶಕ್ತಿಯ ಪ್ರತಿಭೆಯನ್ನು ನಂಬಿಕೆ ಹಾಗೂ ಸಂಕಲ್ಪದಿಂದ ಪುನಃ ಚೇತರಿಸಿಕೊಳ್ಳುವಂತೆ ಮಾಡಬಹುದು. ಇದಕ್ಕೆ ನಾಲ್ಕು ಹೆಜ್ಜೆಗಳು ಹೀಗಿವೆ.

1. ಯಾವ ರೀತಿಯಾದ ಗಾಳಿಯು / ಭೂತವು ಮೆಟ್ಟಿದೆ ಎಂದು ನೋಡುವುದು.
2. ಅದನ್ನು ಸೆಳೆದು ಸೆರೆಹಿಡಿಯುವುದು.
3. ಸೆರೆಹಿಡಿದ ನಂತರ, ಅದಕ್ಕೆ ಯಾವ ರೀತಿ ಉಪಚಾರನೀಡುವುದು
4. ಗುಣಪಡಿಸಿದ ವ್ಯಕ್ತಿಯನ್ನು ನೋಡಿಕೊಳ್ಳುವುದು.

ಗುರುಪ್ರೀತಿಸಿಂಗ್‌ರವರ ರಹಸ್ಯವಾದ ಈ ಕ್ಷುದ್ರಶಕ್ತಿಗಳ ಸಂಶೋಧನೆ ಬಗ್ಗೆ ಹಲವಾರು ಪ್ರಶ್ನೆಗಳನ್ನು ಪ್ರೇಕ್ಷಕರು ಕೇಳಿದರು. ಆಕ್ಟೋಬರ್ 4 ನೇ ತಾರೀಖು ಬೆಳಗ್ಗೆ 6ಕ್ಕೆ ಬ್ರಹ್ಮರ್ಷಿ ಪತ್ರೀಜಿಯವರ ವೇಣುಗಾನದೊಂದಿಗೆ ಧ್ಯಾನೋದಯವಾಯಿತು.

9ಕ್ಕೆ ರಾಶಾರವರು ಅರ್ಧತಾಸು ಧ್ಯಾನವನ್ನು ಮಾಡಿಸಿದರು. ಇವರು "ಒನ್‌ನೆಸ್" ಹಾಗೂ "ದಿ ಕಾಲಿಂಗ್" ಎಂಬ ಪುಸ್ತಕಗಳ ರಚನಕಾರರು ರಾಶಾ ಅಮೆರಿಕಾದವರು. ಆದರೆ ಕಳೆದ 8 ವರ್ಷಗಳಿಂದ

ಭಾರತವನ್ನೇ ತಮ್ಮ ಮನೆಯನ್ನಾಗಿ ಮಾಡಿಕೊಂಡಿದ್ದಾರೆ. ''ನಮಸ್ತೆ'' ಎಂದು ಹೇಳುತ್ತಾ ಧ್ಯಾನವನ್ನು ಶುರುಮಾಡಿದರು. ''ನಾನು ನಿಮ್ಮಲ್ಲಿ ದೈವತ್ವವನ್ನು ಕಾಣುತ್ತಿದ್ದೇನೆ, ನೀವು ನಿಮ್ಮಲ್ಲಿ ನೆಲೆಸಿದಾಗ ನಾನು ನನ್ನಲ್ಲಿ ನೆಲೆಸುತ್ತೇನೆ - ಆಗ ನಾವು ಎಲ್ಲರೂ ಒಮ್ಮೆಲೇ ದೈವತ್ವದಲ್ಲಿರುತ್ತೇವೆ.'' ಆಕೆಯ ಧ್ಯಾನದ ಹೆಸರು "Journey into the heart of the divine lover".

**10** ಘಂಟೆಗೆ Dr.Newton, "The Science of Past life regression" (ಹಿಂದಿನ ಜನ್ಮಗಳನ್ನು ತಿಳಿದುಕೊಳ್ಳುವ ವಿಜ್ಞಾನ) ಕಾರ್ಯಕ್ರಮವನ್ನು ನಡೆಸಿಕೊಟ್ಟರು. ಶ್ರೀ ಅರುಣ್ ಜೈನ್ ರವರ ಗಿಟಾರ್ ವಾದನದಿಂದ ಸಭೆಯನ್ನು ಆರಂಭಗೊಳಿಸಲಾಯಿತು. ಅರುಣ್‌ರವರನ್ನು ಡಾ.ನ್ಯೂಟನ್ ''ಮ್ಯೂಸಿಕ್ ಬುದ್ಧ'' ಎಂದು ಕರೆದರು. ಡಾ.ನ್ಯೂಟನ್‌ರ ಪ್ರದರ್ಶನ ''ನಾನು'' ಎಂಬ ಬಹುವಿಧವಾದ ವ್ಯಕ್ತಿತ್ವವನ್ನು ಪ್ರತಿಬಿಂಬಿಸುವ ಕಥೆಯೊಂದಿಗೆ ಆರಂಭಿಸಿದರು. ''ಭೂಮಿಯು ನಮ್ಮ ಆಟದ ಮೈದಾನ, ಶಾಲೆ ಹಾಗೂ ನಮ್ಮನ್ನು ಪರೀಕ್ಷಿಸಲು ಇರುವ ರಂಗಭೂಮಿ.'' ಇದೊಂದು 3-D ಜಗತ್ತು. ಇದೊಂದು ಪರಂಪರೆಯನ್ನು ಸೂಚಿಸುವ, ಕಾರ್ಯ ಕಾರಣಗಳ, ದ್ವಂದ್ವಾತ್ಮಕವಾದ, ದಟ್ಟವಾದ ಮರೆವಿನ ಪ್ರಪಂಚ. ಈ ಅನುಭವವು ನಮಗೆ ಬುದ್ಧಿಯನ್ನು ಜ್ಞಾನವನ್ನು ಒದಗಿಸುತ್ತದೆ. ಈ ತೆರನಾದ ಪುನರ್ಜನ್ಮಗಳ ನಾಟಕರಂಗದಲ್ಲಿ ಆತ್ಮಗಳು ಹಲವಾರು ಹಂತಗಳನ್ನು ಹಾದು ಹೋಗುತ್ತವೆ. ಅವೇನೆಂದರೆ.

**1.** ಶಿಶು ಆತ್ಮಗಳು (Infant souls): ಈ ಆತ್ಮಗಳು ಸದಾ ಬದುಕುಳಿಯುವ ಭಯದಲ್ಲೇ ಜೀವಿಸುತ್ತವೆ.

**2.**ಬಾಲಾತ್ಮಗಳು (Baby souls): ಈ ಆತ್ಮಗಳಿಗೆ ಕಟ್ಟುಪಾಡುಗಳೆಂದರೆ ಅಪಾರವಾದ ಗೌರವ. ತಮ್ಮ ಜೀವನದ ಪೂರ್ತಿ ನಿಯಮಗಳನ್ನು ಪಾಲಿಸುತ್ತಿರುತ್ತವೆ.

**3.**ಯುವ ಆತ್ಮಗಳು (Young souls): ಈ ಆತ್ಮಗಳಿಗೆ ಪದಾರ್ಥಗಳ ಮೇಲೆ ಹೆಚ್ಚು ವ್ಯಾಮೋಹವಿರುತ್ತದೆ. ಹೆಸರು, ಕೀರ್ತಿ, ಪ್ರತಿಷ್ಠೆ, ಹಣ ಇತ್ಯಾದಿ ಇವರಿಗೆ ಬಲು ಪ್ರಿಯ. ಬಾಳಿನಲ್ಲಿ ಉನ್ನತವಾದ ಗುರಿ ಇರುವುದಿಲ್ಲ, **80%** ಭೂಮಿಯು ಇಂತಹ ಆತ್ಮಗಳಿಂದ ತುಂಬಿದೆ.

**4.**ಪ್ರೌಢಾತ್ಮಗಳು (Mature souls): ಈ ಆತ್ಮಗಳಿಗೆ ಭಾವನೆಗಳೆಂದರೆ ಹೆಚ್ಚು ಗೌರವ. ಈ ಆತ್ಮಗಳು ತಮ್ಮ ಹೃದಯವನ್ನು ತೆರೆದಿಟ್ಟಿರುತ್ತವೆ. ಪ್ರೇಮ, ಅನುಕಂಪ, ಒಗ್ಗಟ್ಟು ಸಂಬಂಧಗಳಿಗೆ ಬೆಲೆ ಕೊಡುತ್ತಾರೆ. ಈ ಹಂತದಲ್ಲಿ ಆತ್ಮಾನ್ವೇಷಣೆ/ಸತ್ಯಾನ್ವೇಷಣೆ ಶುರುವಾಗುತ್ತದೆ.

**5.**ವೃದ್ಧಾತ್ಮಗಳು (Old soul): ಸುಮಾರು **150** ಕ್ಕಿಂತ ಹೆಚ್ಚು ಜನ್ಮಗಳನ್ನು ಪಡೆದ ನಂತರ. ಆತ್ಮಗಳು ಈ ಹಂತವನ್ನು ತಲುಪುತ್ತವೆ. ಈ ಆತ್ಮಗಳಿಗೆ ಭಗವಂತನನ್ನು ತಮ್ಮಲ್ಲಿಯೇ ಇದ್ದಾನೆಂಬುದು ಗೊತ್ತಿರುತ್ತದೆ. ಇವರಿಗೆ ದೈವತ್ವ ಬಾಳಿನಲ್ಲಿ ಉನ್ನತ ಶ್ರೇಷ್ಠವಾದ ಗುರಿ ಬಹಳ ಮುಖ್ಯ. ಭೂಮಿಯ ಮೇಲೆ ತಮ್ಮ ಪಾತ್ರವನ್ನು ಕೊನೆಗೊಳಿಸುವುದು ಬಹಳ ಮುಖ್ಯ ಅವರಿಗೆ ದೇವರ ಆಟದ ಬಗ್ಗೆ ಅರಿವಿರುತ್ತದೆ.

**6.**ಉತ್ಕೃಷ್ಟ ಆತ್ಮಗಳು (Transcendental Soul): ಇವು ಶ್ರೇಷ್ಠವಾದ ಆತ್ಮಗಳು ಅನುಭವಗಳನ್ನ ಮೀರಿ ಬೆಳೆದ ಆತ್ಮಗಳು. ಇವರು ಬೇರೆಯವರಲ್ಲಿ ಪ್ರೋತ್ಸಾಹದ ಕಿಡಿಯನ್ನು ಹಚ್ಚಲು ಭೂಮಿಗೆ ಬರುತ್ತಾರೆ. ಕಲಿಸುವುದಕ್ಕಾಗಿ ಬರುವ ಆತ್ಮಗಳಿವು.

**7.**ಅನಂತ ಆತ್ಮಗಳು (Infinite Soul): ಇವರು ತಮ್ಮ ಅವತಾರಗಳ ಮೂಲಕ ಸೃಷ್ಟಿಯಲ್ಲಿ ಒಮ್ಮತವನ್ನು ತರುವಂಥವರು.

Dr.Newton ಮರಣದ ಕ್ಷಣಗಳನ್ನು ಬಹಳ ಮುಖ್ಯವೆಂದು ಪರಿಗಣಿಸುತ್ತಾರೆ. ಆ ಕ್ಷಣಗಳಲ್ಲಿ ಮನಸ್ಸು ತನ್ನ ಶಾಖೆಗಳನ್ನು ತೆರೆದು ಮರಣಕಾಲದಲ್ಲಿನ ಮಾಹಿತಿಯಿಂದ ಕರ್ಮದ ಪರಿಣಾಮವನ್ನು ಅರಿಯುತ್ತದೆ. ಕರ್ಮದ ಮೂಲಕ ಆತ್ಮಕ್ಕೆ ಅಪಾರವಾದ ಜ್ಞಾನವು ಸಿದ್ಧಿಸುತ್ತದೆ. ಇದರಿಂದ ಆತ್ಮೋನ್ನತಿಯಾಗುತ್ತದೆ. ಧ್ಯಾನವು ನಿಮ್ಮ ಹಳೆಯ ಕರ್ಮವನ್ನು ತ್ಯಜಿಸುವಲ್ಲಿ ಸಹಾಯ ಮಾಡುತ್ತದೆ. ಈ ಲೋಕದಲ್ಲಿ ಪ್ರತಿಯೊಂದು ಸನ್ನಿವೇಶಕ್ಕೂ / ಕರ್ಮಕ್ಕೂ ಮತ್ತೊಂದು ಸನ್ನಿವೇಶಕ್ಕೂ ಸಂಬಂಧವಿರುತ್ತದೆ. ಮಾಯೆಯ ಬಲೆಯಿಂದಲೇ ಕರ್ಮಗಳು ಕಾರ್ಯರೂಪಕ್ಕೆ ಬರುತ್ತವೆ. ಹಲವಾರು ಜನ್ಮಗಳ ಮೂಲಕ ವಿಧವಿಧವಾದ ಅನುಭವಗಳನ್ನು ಪಡೆಯುತ್ತೇವೆ. ಈ ಅನುಭವಗಳ ಮೂಲಕ ಆತ್ಮಕ್ಕೆ ಜ್ಞಾನವಿಕಾಸವಾಗಿ ಕ್ರಮೇಣ ಶಿಕ್ಷೆಗೆ ಗುರಿಯಾಗುವ ಹಂತದಿಂದ ಮೇಲೇರುತ್ತಾ, ಸೃಷ್ಟಿಕರ್ತನ ಪದವಿಯನ್ನು ಪಡೆಯುತ್ತದೆ. ಅಂದರೆ, ಮೊದಮೊದಲು ತಾನೊಂದು ಬಲಿ ಪಶುವಿನಂತೆ ಸನ್ನಿವೇಶಗಳ ಒತ್ತಡಕ್ಕೆ ಸಿಲುಕಿ ತಪ್ಪಿಸಿಕೊಳ್ಳಲಾಗದೆ ಸೋಲನ್ನು ಅನುಭವಿಸುತ್ತದೆ. ನಂತರದ ಹಂತಗಳಲ್ಲಿ ಕ್ರಮೇಣ ತಾನೇ ತನ್ನ ಸನ್ನಿವೇಶಗಳನ್ನು ಸೃಷ್ಟಿಸಿಕೊಳ್ಳುತ್ತಾ, ತನ್ನ ಬದುಕಿಗೆ ತಾನೇ ಒಡೆಯನಾಗುತ್ತಾನೆ. From Victim hood to creator hood, ಈ ಪ್ರಯಾಣದಲ್ಲಿ ಸಾಪೇಕ್ಷ ಸತ್ಯದಿಂದ (Relative truth) ಪರಮ ಸತ್ಯದೆಡೆಗೆ (Absolute Truth) ಸೇರಿಕೊಳ್ಳುತ್ತೇವೆ. ಕರ್ಮವನ್ನು ತ್ಯಜಿಸಿದಾಗ, ಕಾರ್ಯಕಾರಣಗಳಿಗೆ ಅತೀತವಾಗಿ ಜೀವಿಸಿದಾಗ, ಪರಮಸತ್ಯವನ್ನು ಪಡೆಯುತ್ತೇವೆ. ಈ ರೀತಿಯಾಗಿ ನಾವು ಸ್ವರ್ಯ ಸೃಷ್ಟಿಯ ಕ್ರಮದಲ್ಲಿ ಭಾಗಿಗಳಾಗುತ್ತೇವೆ. ನಾವು ಬಹುಮುಖಿ ಅಸ್ತಿತ್ವವುಳ್ಳ ಜೀವಿಗಳು. ನಮಗೆ ಅನೇಕ ಭಾಗಗಳಿವೆ. ಅವು ಪುನರ್ಜನ್ಮದ ಮೂಲಕ ನಮ್ಮ ಅಸ್ತಿತ್ವ, ಹದಿಹರೆಯದ ಅವತಾರದ ಮೂಲಕ ನಮ್ಮ ಅಸ್ತಿತ್ವ, ವೃದ್ಧಾತ್ಮದ ಅಸ್ತಿತ್ವ,

ಅನಾದಿ ಕಾಲದ ನಮ್ಮ ಅಸ್ತಿತ್ವ, ಪ್ರಸ್ತುತ ಕಾಲದಲ್ಲಿ ನಮ್ಮ ಜನ್ಮ ವಿಚಾರ, ಹಾಗೂ ಮುಂಬರುವ ಕಾಲದಲ್ಲಿ ನಮ್ಮ ಅವತಾರಗಳಲ್ಲಿ ನಮ್ಮ ಅಸ್ತಿತ್ವ- ಹೀಗೆ ಅನಂತವಾದ ನಮ್ಮ ಆತ್ಮಕ್ಕೆ ಹಲವಾರು ಅನುಭವದ ಭಾಗಗಳು ಇವೆ.

ಆದಾದ ನಂತರ, ನೃತ್ಯದ ಮೂಲಕ ಎಲ್ಲರನ್ನೂ ರಂಜಿಸಲಾಯಿತು. ಜೋಡಿಗಳಂತೆ ನಾಟ್ಯಮಾಡಲಾಯಿತು. ಕೆಲವರು ತಮ್ಮ ಅನುಭವ ಹಂಚಿಕೊಂಡರು. ಎರಿಕ್ ತಮ್ಮ ಹಾರ್ಪ್‌ನ ಮೂಲಕ ಲೆಮ್ಯೂರಿಯನ್ ಮೆಮೋರಿಸ್ ನುಡಿಸಿದರು. ಡಾ.ನ್ಯೂಟನ್ ಮುಂದುವರೆಸಿ ಹೀಗೆಂದರು: ಗತಿಸಿಹೋದ ಅನುಭವಗಳು ಮತ್ತೆ ಮತ್ತೆ ಪ್ರಸಾರಗೊಳ್ಳುತ್ತಲೇ ಇರುತ್ತದೆ. ಅದಕ್ಕೆ ನಾವೇ ವಿದಾಯ ಹೇಳಬೇಕು. ನಮ್ಮ ಭವಿಷ್ಯತ್ತಿನ ಪುನರ್ನಿರ್ಮಾಣ ನಾವೇ ಮಾಡಿಕೊಳ್ಳಬೇಕು. ನಮ್ಮ ಹಿಂದಿನ ಕಾಲದ ಪರಿಣಾಮವೇ ನಾವಾಗಿ ಬಂದಿದ್ದೇವೆ. ನಾವೆಲ್ಲರೂ ಈ 4 ವಿಧವಾದ ಜೀವನವನ್ನು ನಡೆಸಿದವರಾಗಿದ್ದೇವೆ; ಅವುಗಳೆಂದರೆ;

1. ಪುರೋಹಿತನ ಜೀವನ
2. ಬಡತನ ಅಥವಾ ಶ್ರಮಜೀವಿಯ ಜೀವನ
3. ರಾಜಮನೆತನದ/ ಅಧಿಕಾರದ ಜೀವನ
4. ಭೋಗ/ ಇಂದ್ರಿಯ ಲೋಲನಾಗಿರುವ ಜೀವನ

ನಾವು ಅರಿವಿನಿಂದ ನಮ್ಮ ಭೂತಕಾಲವನ್ನು ತ್ಯಜಿಸಬೇಕಾಗಿದೆ. ಗತಿಸಿಹೋದದ್ದನ್ನು ಗತಿಸಲು ಬಿಡಬೇಕು. ಪ್ರೀತಿಯನ್ನು ಬಿತ್ತಿದರೆ, ಪ್ರೀತಿಯೇ ನಗುತ್ತದೆ. ದ್ವೇಷವನ್ನು ಬಿತ್ತಿದರೆ ದ್ವೇಷವೆ ಬೆಳೆಯುತ್ತದೆ. ಆದಾದ ಮೇಲೆ, ಗತಕಾಲವನ್ನು ಹಾಗೂ ಭವಿಷ್ಯಕಾಲವನ್ನು ಅನುಭವಕ್ಕೆ ತಂದುಕೊಳ್ಳುವ ಪ್ರಯೋಗವನ್ನು ಡಾ.ಲಕ್ಷ್ಮಿ ನ್ಯೂಟನ್ ಮಾಡಿಸಿದರು. ಬಹಳಷ್ಟು ಮಂದಿ ಅವರಿಗುಂಟಾದ ಅನುಭವಗಳನ್ನು ಆಶ್ಚರ್ಯದಿಂದ ಹಂಚಿಕೊಂಡರು.

ಅಂದು ಮಧ್ಯಾಹ್ನ ಮೈಕೆಲ್ ಜ್ಯಾಕ್ಸನ್‌ರ "ಅರ್ತ್ ಸಾಂಗ್" ವಿಡಿಯೋ ಪ್ರದರ್ಶಿಸಲಾಯಿತು. ಆದಾದ ಮೇಲೆ, ಎಸ್ಪೆರೇಡ್ ಅನಾನಸ್‌ರಿಂದ "ಗಿಡಗಳಿಂದ ಸಂಗೀತ" ಎಂಬ ಕಾರ್ಯಕ್ರಮವನ್ನು ನಡೆಸಿಕೊಟ್ಟರು.

ಇಟಲಿಯ ಫೆಡೆರೇಷನ್ ಆಫ್ ದಮನ್‌ಹುರ್‌ನಲ್ಲಿ ಈಕೆ ಲೆಕ್ಚರರ್ ಹಾಗೂ ಕಮ್ಯೂನಿಕೇಷನ್ಸ್ ಡೈರೆಕ್ಟರ್ ಆಗಿ ಕೆಲಸನಿರ್ವಹಿಸುತ್ತಿದ್ದಾರೆ. ಪ್ರಕೃತಿಯೊಂದಿಗೆ ಸ್ನೇಹದಿಂದ ಬಾಳಬೇಕೆಂಬುದೇ ಈ ಸಂಗೀತ ಸಂಜೆಯ ಮುಖ್ಯ ಉದ್ದೇಶ. ಬಹಳ ಆಶ್ಚರ್ಯ ತರುವ ಸಂಗತಿಯೆಂದರೆ, ಸಸ್ಯಗಳು ಕೂಡಾ ತಮ್ಮ ಭಾವನೆಗಳನ್ನು ವ್ಯಕ್ತಪಡಿಸುವಲ್ಲಿ ಉತ್ಸಾಹ ಹೊಂದಿವೆ. ಎಲೆಗಳ ಮೇಲ್ಭಾಗದಲ್ಲಿ ಹಾಗೂ ಬೇರುಗಳಲ್ಲಿ ಉಂಟಾಗುತ್ತಿರುವ ರಾಸಾಯನಿಕ ಬದಲಾವಣೆಗಳನ್ನು ಸೆರೆಹಿಡಿದು ಅದನ್ನು ಸಂಗೀತ ಸ್ವರಗಳಾಗಿ ಮಾರ್ಪಾಟು ಮಾಡುವ ಯಂತ್ರಗಳನ್ನು ಅಳವಡಿಸಲಾಗಿತ್ತು. ಅವುಗಳು ನಿರ್ಮಿಸಿದ ಸಂಗೀತದ ಅರಿವು ಅವುಗಳಿಗಿತ್ತು. ಪ್ರೇಕ್ಷಕರಿಗೆ ಇದು ಸ್ಪಷ್ಟವಾಗಿ ತಿಳಿದುಬರುತ್ತಿತ್ತು. ಏಕೆಂದರೆ, ಕೆಲವೊಮ್ಮೆ ಆ ಗಿಡಗಳ ತಮ್ಮ ಪ್ರತಿಕ್ರಿಯೆಯನ್ನು ತಡೆಹಿಡಿಯುತ್ತಿದ್ದುವು. ಎಂದೂ ಕೇಳಿರದ ಸಂಗೀತ ಸುರುಳಿಯನ್ನು ಆಲಿಸುವಾಗ ಪ್ರತಿಯೊಂದು ಗಿಡಕ್ಕೂ ಅದರದೇ ಆದ ವೈಯಕ್ತಿಕ ನಿಲುವು ಇರುವುದನ್ನು ಗಮನಿಸಿದರು. ಆದರೂ ಆ ಸಂಗೀತದಲ್ಲಿ ಒಮ್ಮತವಿರುವುದು ಕಾಣಿಸಿತ್ತು. ದಮನ್‌ಹುರ್ ಸಂಘದ ಬಗ್ಗೆ ಹಾಗೂ ಅಲ್ಲಿಯ ಸುಂದರ ದೇಗುಲಗಳ ಬಗ್ಗೆ ಒಂದು ಪ್ರದರ್ಶನವಿತ್ತು.

ಆದಾದ ಮೇಲೆ, ಡಾ.ನ್ಯೂಟನ್ ಹಾಗೂ ಡಾ.ಲಕ್ಷ್ಮಿ ನ್ಯೂಟನ್ "Family Consultation" (ಕುಟುಂಬ ಸಲಹೆ) ಎಂಬ ವಿಷಯವನ್ನು ನಮ್ಮ ಮುಂದಿಟ್ಟರು. ಇದು ಬಹಳ ಪ್ರಭಾವಶಾಲಿ ವಿಷಯವಾಗಿದೆ. ಒಂದು ಕುಟುಂಬದಲ್ಲಿ ಎಲ್ಲ ಸಂಬಂಧಗಳು ಕೇಳಿ, ಪಡೆದುಕೊಂಡುವ ಬಂದವುಗಳೇ ಆಗಿವೆ. ಇದರ ಕುರಿತು ಎಲ್ಲಾ ಮಾಹಿತಿಯನ್ನೂ field ನಿಂದ ಪಡೆಯಬಹುದು. ಒಂದೇ ಕುಟುಂಬದ ಸಂಬಂಧಗಳ ಬಗ್ಗೆ ತಿಳಿಯಬೇಕಾದರೆ, ಅಂತರ್ದೃಷ್ಟಿಯ ಕ್ರಿಯೆಯಿಂದ ಸಾಧ್ಯ (Institutive Process). ಹೇಗೆ ಕೌಟುಂಬಿಕ ರಹಸ್ಯಗಳಿಂದ ಮುಂದೆ ಬರಲಿರುವ ಕಾಲದಲ್ಲಿ ಕೆಲವು ಅಹಿತಕರ ಘಟನೆಗಳಾಗುತ್ತವೆಂದು ಡಾ.ನ್ಯೂಟನ್ ವಿವರಿಸಿದರು. ಒಂದು ಕುಟುಂಬದ ಜನರ ಮಧ್ಯೆ ಹೇಗೆ ಸಾಮರಸ್ಯ ಅತ್ಯಾವಶ್ಯಕವೆಂದು ಹಾಗೆಯೇ ಒಬ್ಬರ ಮೇಲೊಬ್ಬರು ಅತಿ ಹೆಚ್ಚು ಒತ್ತಡವನ್ನು ಹಾಕಿ ಅವರಿಂದ ಬಹಳಷ್ಟು ಬಯಸುವುದರಿಂದ ಕುಟುಂಬಗಳು ಒಡೆಯುವ ವಿಚಾರವನ್ನು ತಿಳಿಸಿದರು. ನಾವು ವ್ಯಕ್ತಪಡಿಸುವ ಯಾವುದೇ ದುರ್ಗುಣವು ನಮ್ಮ ಮುಂದಿನ ಪೀಳಿಗೆಯವರಲ್ಲಿ ಕಾಣಿಸಿಕೊಳ್ಳುತ್ತದೆ. ಒಂದು ಕುಟುಂಬದಲ್ಲಿ ಒಬ್ಬ ವ್ಯಕ್ತಿ ಸತ್ಯವನ್ನು ಅರಿತು ಜ್ಞಾನೋದಯವಾದರೆ, ಅವನ ಹಿಂದಿನ 7 ತಲೆಮಾರಿನವರು ಹಾಗೂ ಮುಂದಿನ 7 ತಲೆಮಾರಿನವರನ್ನು ಕರ್ಮದಿಂದ ಬಂಧಮುಕ್ತರನ್ನಾಗಿ ಮಾಡಬಹುದು. ಮಧ್ಯರಾತ್ರಿ 12ರ ಹೊತ್ತಿಗೆ ಪೌರ್ಣಮಿ ಧ್ಯಾನವು 2 ತಾಸುಗಳವರೆಗೆ, ನಡೆದು ಆ ದಿನದ ಮುಕ್ತಾಯವಾಯಿತು.

GCSSನ ಕೊನೆಯ ದಿನ ಬೆಳಗ್ಗೆ 6ಕ್ಕೆ ಪತ್ರೀಜಿಯವರ ವೇಣುಗಾನದೊಂದಿಗೆ ಆರಂಭವಾಯಿತು. 9.00 ಘಂಟೆಗೆ ಶ್ರೀಮತಿ ಜಸ್ಮೀನ್ ಸುಮಾರು ಒಂದು ತಾಸಿನವರೆಗೆ ಧ್ಯಾನ ಮಾಡಿಸಿದರು. ಆದಾದ ಮೇಲೆ, ಪಿರಮಿಡ್ ಯೂತ್ ಮೆಡಿಟೇಷನ್ ಅಸೋಸಿಯೇಷನ್ ಕಡೆಯಿಂದ ಧ್ಯಾನ ಪ್ರಚಾರದ ಬಗ್ಗೆ ಮಾಹಿತಿ ನೀಡಿದರು. ದೇಶದಾದ್ಯಂತ ಅವರು ಧ್ಯಾನ ಪ್ರಚಾರಮಾಡಲು ಹಮ್ಮಿಕೊಂಡಿರುವ ಚಟುವಟಿಕೆಗಳ ಬಗ್ಗೆ ತಿಳಿಸಿದರು. ಅವರಿಗೆ ನಮ್ಮೆಲ್ಲರ ಪ್ರೋತ್ಸಾಹ, ಸಹಾಯ ಅತ್ಯವಶ್ಯಕ. ಆದಾದ ಮೇಲೆ ಎರಿಕ್‌ರವರ ಸರದಿ. "Preparing for coming changes", "ಮುಂದೆ ಬರುವ ಬದಲಾವಣೆಗಳಿಗೆ" ತಯಾರಿ ಎಂಬ ವಿಚಾರ ಅವರದು. ಎರಿಕ್ ಬರ್ಗ್ಲ್ಯಾಂಡ್ USAಯಲ್ಲಿ ರೆಕಾರ್ಡಿಂಗ್ ಆರ್ಟಿಸ್ಟ್. ಅವರಿಗೆ ಹಳೆಯ ಕಾಲದ ಸಂಗೀತ ಶೈಲಿಯನ್ನು ಇಷ್ಟಪಡುತ್ತಾರೆ. ಅವರ ಅಸಮಾನ್ಯವಾದ ಸಂಗೀತ ಪ್ರತಿಭೆಯೊಂದಿಗೆ, ಆಧ್ಯಾತ್ಮಿಕ ತಿರುಳನ್ನು ಮಿಶ್ರಣ ಮಾಡುವ ಚಾತುರ್ಯವಿದೆ. ಹಲವಾರು ವ್ಯಾಯಮಗಳನ್ನು ಹಾಗೂ ಹುಮ್ಮಸ್ಸು ತೇಜಸನ್ನು ಮೇಲಕ್ಕೆತ್ತಲು ಸಹಾಯ ಮಾಡುವ ಮುದ್ರೆಗಳನ್ನು ಹೇಳಿಕೊಟ್ಟರು. ಹಾಗೆಯೇ, ಕೋಪದ ಮೇಲೆ ನಿಯಂತ್ರಣ, ಸ್ವಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳುವಿಕೆ, ಭಯದ ಮೇಲಣ ಜಯ, ಖಿನ್ನತೆಯನ್ನು (Depression) ಗುಣಪಡಿಸುವುದು, ಅನುಮಾನಗಳಿಂದ ಮುಕ್ತರಾಗುವುದು, ದುಃಖ ಹಾಗೂ ಚಿಂತೆಯಿಂದ ಬಿಡುಗಡೆ, ಹೃದಯಾಘಾತಗಳನ್ನು ತಡೆಯುವುದು, ಹಳೆಯ ದುರಭ್ಯಾಸಗಳನ್ನು ಬಿಡುವುದು, ಸತ್ಯಾಂಶವನ್ನು ಒಪ್ಪಿಕೊಳ್ಳುವುದು, ದೀರ್ಘಕಾಲದವರೆಗೆ ಧ್ಯಾನ ಮಾಡುವುದು, ಹಳೆಯ ನೆನಪುಗಳನ್ನು ಅಳಿಸಿಹಾಕುವುದು. ಬೊಜ್ಜನ್ನು ಕರಗಿಸುವುದು, ಕಣ್ಣು ಹಾಗೂ ಕಿವಿಯ ತೊಂದರೆಗಳನ್ನು ಗುಣಪಡಿಸಿಕೊಳ್ಳುವ ವಿಧಾನವನ್ನು ತಿಳಿಸಿದರು.

ಹೊಸ ಶಕ್ತಿಯೆಂದರೆ, ಸಾಮೂಹಿಕ ಜೀವನ ನಡೆಸುವುದು, ಜನರೊಂದಿಗೆ ಒಟ್ಟಾಗಿ ಬಾಳುವುದು. ಎಲ್ಲರಲ್ಲೂ ಮಹೋನ್ನತ ಉದ್ದೇಶಗಳನ್ನು ಹೊರತರುವುದೇ ನಮ್ಮ ಉದ್ದೇಶವಾಗಿದೆ. ನಾವು ಮಾಡುವ ಕೆಲಸದಲ್ಲಿ ಚಾಕಚಕ್ಯತೆಯನ್ನು ಪ್ರದರ್ಶಿಸಿದಾಗ ನಮ್ಮ ಆತ್ಮಗೌರವವು ಹೆಚ್ಚುತ್ತದೆ. ಇದು ಪರಿವರ್ತನೆಯ ಸಮಯ. ಸಮುದ್ರದೇವತೆ ನೆಪ್ಚ್ಯೂನ್ ಉತ್ತುಂಗವಾದ ಸಾಮರ್ಥ್ಯದಿಂದ ಸಿದ್ಧವಾಗಿದೆ. ಯುರೇನಸ್ ಗ್ರಹವು ಎಲ್ಲ ಹೊಸತನಕ್ಕೆ ಪ್ರತೀಕವಾಗಿದ್ದು, ಮುಂದೆ ಕಾಣಲಿರುವ ಬದಲಾವಣೆಗೆ, ಪರಿವರ್ತನೆಗೆ ಪ್ರತೀಕವಾಗಿ ಪ್ಲುಟೋ ಒಟ್ಟಾಗಿ ಬರಲಿದ್ದಾರೆ. ಮಾಯನ್‌ರು ಹೇಳಿದಂತೆ ಮತ್ತೆ ಪಿರಮಿಡ್‌ಗಳು ಸಚೇತನಾವಸ್ಥೆಗೆ ಬರಲಿವೆ. ಇನ್ಕಾ ಎಂಬ ಆದಿವಾಸಿಗಳು ಬೇರೆ ಗ್ರಹದ ಜೀವಿಗಳು ಇಲ್ಲಿಗೆ ಪ್ರಯಾಣ ಹೂಡುವುದಾಗಿ ತಿಳಿಸಿದ್ದರು.

ವೇದಗಳು ಈ ಅದ್ಭುತವಾದ ಸಮಯದ ಬಗ್ಗೆಯೇ ಸೂಚಿಸಿರುವುದು. ಇದೇ ಸಮಯದಲ್ಲಿ ನಮ್ಮ ಸೌರಮಂಡಲವು ಉಚ್ಛ ಸ್ಥಿತಿಗೆ ಏರುತ್ತದೆ. ನಮಗಿಂತಲೂ ಬಲು ದೊಡ್ಡದಾದ ಒಂದು ಪ್ರಣಾಳಿಕೆಗೆ ನಾವು ಭಾಗಿಗಳಾಗಿದ್ದೇವೆ. ಬೇರೆ ನಕ್ಷತ್ರಮಂಡಲಗಳು ನಮ್ಮ ಭೂಮಿಯನ್ನೇ ನೋಡುತ್ತಿವೆ.

ಸಿರಿಯಸ್ ನಮಗೆ ಹಳೆಯದನ್ನು ಬಿಟ್ಟುಕೊಡುವ ಸಾಮರ್ಥ್ಯವನ್ನು ತಂದುಕೊಡುತ್ತಿದೆ. ಪ್ಲೀಡಿಯಸ್ ಎಂಬ ಸಮುದಾಯವು ನಮಗೆ ಪುನರ್ನಿರ್ಮಾಣದ ಕಲೆಯನ್ನು ತಂದುಕೊಡುತ್ತಿದೆ, ಹಾಗೂ (the Great Bear) ದ ಗ್ರೇಟ್ ಬೇರ್ ಎಂದರೆ, ಒಂದು ಮಹಾ ಉತ್ಕ್ರಾಂತಿ ಪರಿವರ್ತನೆಯ ಪ್ರತೀಕ. ಈ ಎಲ್ಲ ಏಳು ನಕ್ಷತ್ರಗಳು ನಮಗೆ ಹೊಸ ಚೈತನ್ಯವನ್ನು ತುಂಬುತ್ತಿದೆ. ಹೊಸದಾಗಿ ಜನಿಸುತ್ತಿರುವ ಮಕ್ಕಳು ಬಹಳ ಅಭಿವೃದ್ಧಿ ಹೊಂದಿರುವ ಆತ್ಮಗಳು ಭೂಮಿಯು ಈಗ ಒಂದು ಕೇಕ್‌ನಂತೆ. ಅದು ಈಗ ಓವನ್‌ನಲ್ಲಿದೆ.

ಎಲ್ಲ ಉತ್ತುಂಗಕ್ಕೇರಿದ ಗುರುಗಳು ಭೂಮಿಯನ್ನೇ ನೋಡುತ್ತಿದ್ದಾರೆ. ನಾವು ನೆನಪಿನಲ್ಲಿಡಬೇಕಾದ ಸಂಗತಿ ಏನೆಂದರೆ, ನಾವು ಪ್ರತಿಕ್ರಿಯಿಸಿದ ರೀತಿಯಲ್ಲಿಯೇ ನಮ್ಮ ಪರಿಣಾಮವೂ ರೂಪುಗೊಳ್ಳುತ್ತದೆ. (Law of Resonance) ಆದ್ದರಿಂದ, ಪರಿಪೂರ್ಣತೆಯನ್ನು ಮೈಗೂಡಿಸಿಕೊಳ್ಳುತ್ತಿರುವ ಈ ಸ್ವಲ್ಪ ಕಾಲದಲ್ಲಿ ಏನೇ ಆದರೂ ಅದಕ್ಕೆ ಪೂರಕವಾಗಿಯೆ ಅಂದರೆ, ಪಾಸಿಟಿವ್ ಆಗಿ ಪ್ರತಿಕ್ರಿಯೆಯನ್ನು ಕಾಪಾಡಿಕೊಳ್ಳೋಣ, ಆಗ ಅದರ ಪರಿಣಾಮ ಪಾಸಿಟಿವ್ ಆಗಿಯೆ ಇರುತ್ತದೆ. ನಾವು ಮಾಲೀಕರು. ವಿಧಿಯ ಆಟಕ್ಕೆ ತುತ್ತಾಗಿರುವ ಬಡಪಾಯಿಗಳಲ್ಲ, ಮಾಲೀಕರಂತೆಯೆ ಎದೆ ಉಬ್ಬಿಸಿ ಧೈರ್ಯದಿಂದ ಪರಿಸ್ಥಿತಿಗಳನ್ನು ಎದುರಿಸೋಣ.

ಎರಿಕ್ ಮಾತನಾಡುವಾಗ (Sub-personalities) ಉಪ-ವ್ಯಕ್ತಿತ್ವಗಳ ಬಗ್ಗೆ ಹೇಳಿದರು. ನಮ್ಮೆಲ್ಲರಿಗೂ ಉಪ-ವ್ಯಕ್ತಿತ್ವಗಳಿರುತ್ತವೆ. ನಾವೆಲ್ಲರೂ ಅದನ್ನು ಪವಿತ್ರಗೊಳಿಸಿಕೊಳ್ಳಬೇಕಾಗಿದೆ. ಅಂದರೆ, ನಮ್ಮಲ್ಲಿರುವ ಪುರುಷ ಹಾಗೂ ಸ್ತ್ರೀ ಗುಣಗಳನ್ನು ಶುದ್ಧಿಮಾಡಬೇಕಾಗಿದೆ. ಇದಕ್ಕೆ ಉಸಿರೊಂದೇ ಕೀಲಿಕೈ. ನಿಮ್ಮ ಭಯ, ಆತಂಕ, ನೋವುಗಳನ್ನು ಉಸಿರಿಸನ್ನು ಬಿಡುವಾಗ ಹೊರಹಾಕಿರಿ. ಏಕೆಂದರೆ, ಅರ್ಥವಿಲ್ಲದ ಭಯವು ಕಿಡ್ನಿ (ಮೂತ್ರಪಿಂಡಗಳನ್ನು) ಹಾಳು ಮಾಡುತ್ತದೆ, ಅನುಮಾನಗಳು ಹೊಟ್ಟೆಯನ್ನು, ಕೋಪವು ಲಿವರನ್ನು, ಖಿನ್ನತೆಯು ಶ್ವಾಸಕೋಶಗಳನ್ನು ಹಾಳುಮಾಡುತ್ತದೆ. ಅವರು ಅನೇಕ ಬಗೆಯ

ಸದ್ಭಾವನೆಯನ್ನು ದೃಢೀಕರಿಸುವ ವಾಕ್ಯಗಳನ್ನು ಹೇಳಿಕೊಟ್ಟು, ಅದನ್ನು ನಮ್ಮ ಒಳಿತಿಗಾಗಿ ಹೇಗೆ ಉಪಯೋಗಿಸುವುದು ಎಂದು ಹೇಳಿಕೊಟ್ಟರು.

ಅಂದು ಮಧ್ಯಾಹ್ನದ ಕಾರ್ಯಕ್ರಮ ರಾಶಾರವರದು 1987ರಲ್ಲಿ ಆಕೆಗೆ ಒಂದು ದೈವೀಶಕ್ತಿಯ ಮಾರ್ಗದರ್ಶನದ ಮೇರೆಗೆ ಆಕೆ ಕೈಗೊಂಡ ಪ್ರವಾಸವೇ ಈ ಆಧ್ಯಾತ್ಮಿಕತೆ. ಅಲ್ಲಿ ನೆರೆದಿರುವವರನ್ನು ಧ್ಯಾನದ ಹೊಸ ಅನುಭವದಲ್ಲಿ ಮುಳುಗಿಸಿ, (Oneness) ಅವರ ನೆಚ್ಚಿನ "ಏಕತೆ"ಯನ್ನು ಪರಿಚಯಿಸಿಕೊಟ್ಟರು. ಆಕೆಯ ಮಾತುಗಳಲ್ಲಿ, ಪದಗಳಿಗೆ ವಿಶೇಷವಾದ ಶಕ್ತಿಯಿದೆ. ಅವು ದೈವತ್ವಕ್ಕೆ ದಾರಿ ಮಾಡಿಕೊಡುತ್ತದೆ. ಇಂತಹ ಅದ್ವಿತೀಯ ಸಮಯದಲ್ಲಿ ಎಲ್ಲರೂ ದೈವದ ಜೊತೆ ಸಂಬಂಧವನ್ನು ಬೆಳೆಸಿ ತಮ್ಮ ದಿನನಿತ್ಯದ ಕೆಲಸಗಳಲ್ಲಿ ಸಂತಸ ಹೊಂದಬಹುದು. ಈ ಅವಕಾಶವನ್ನು ಸದುಪಯೋಗ ಪಡಿಸಿಕೊಳ್ಳುವ ಬಗೆ ಹೇಗೆ? ಈ ಅವಕಾಶವನ್ನು ಗೌರವಿಸಿದರೆ ಸಾಕು ನಾವದನ್ನು ಸಾಧಿಸದಂತೆಯೆ. ಸಾಧನೆಯೆ ಇದಕ್ಕೆ ಮಾರ್ಗ. ಇದನ್ನು ನಿಮ್ಮ ದಿನಚರಿಯಲ್ಲಿ ಸೇರಿಸಿಕೊಳ್ಳಿ. ಅದಕ್ಕೆ ಪೂರ್ಣ ಗಮನಕೊಡಿ. ನಿತ್ಯವೂ ಅದನ್ನು ಅಭ್ಯಾಸಮಾಡಿ. ಇದು ಮನಸ್ಸಿಗೆ ಸಂಬಂಧಿಸಿದ ವಿಷಯವಲ್ಲ, ಇದು ಹೃದಯದ ಮಾತು. ಬಲು ಸೂಕ್ಷ್ಮವಾದ ವಿಷಯವೆಂದರೆ, ಪುರುಷ ತತ್ವವನ್ನು (ಗುರಿ) ಹಾಗೂ ಸ್ತ್ರೀ ತತ್ವವನ್ನು (ಶರಣಾಗತಿ) ಸಮನಾಗಿ ಪಾಲಿಸುವುದು. ಹೃತೂರ್ವಕವಾಗಿ ಈ ವಿಷಯವನ್ನು ಗಮನಿಸಿ ಪಾಲಿಸಿರಿ. ಜಾತಿಯ ಬಗ್ಗೆ ಇಲ್ಲಿ ಯಾವ ಪ್ರಸ್ತಾಪನೆ ಇಲ್ಲ. ನಿಮ್ಮ ಆಧ್ಯಾತ್ಮಿಕ ಪ್ರಯಾಣವು ನಿಮ್ಮ ವೈಯಕ್ತಿಕ ವಿಷಯ. ನೀವು ಒಂಟಿಯಲ್ಲ ನೀವೆಲ್ಲರೂ ಎಷ್ಟೊ ಮಂದಿ "ಏಕತೆ"ಯಲ್ಲಿ ಇದ್ದೀರಿ. ಇದು ನಿಮ್ಮ ಬ್ಯಾಂಕ್ ಅಕೌಂಟ್ ಇದ್ದ ಹಾಗೆ. ನಿಮಗೆ ಉಂಟಾಗುವ ಪ್ರತಿಯೊಂದು ಸನ್ನಿವೇಶವೂ ನೀವೇ ಸೆಳೆದಿರುತ್ತೀರಿ. ನೀವು ಯಾರ ಜೊತೆ ಕಾಲಕಳೆಯುತ್ತೀರಿ, ಏನು ಮಾಡುತ್ತೀರಿ ಇತ್ಯಾದಿ ಇತ್ಯಾದಿಯನ್ನು ಸರಿಯಾಗಿ ನಿರ್ಧರಿಸಬೇಕಾಗಿದೆ. ಯಾವುದಾದರು ಕೆಲಸ ಮಾಡುವ ಮುಂಚೆ, ನಿಮ್ಮನ್ನು ನೀವೆ ಪ್ರಶ್ನಿಸಿಕೊಳ್ಳಿ. "ಇದರಿಂದ ನನ್ನ ಶಕ್ತಿಯು ಎಷ್ಟು ವ್ಯಯವಾಗಬಹುದು?" ಪ್ರತಿಯೊಂದು ಅನ್ನದ ಅಗುಳು ಕೂಡಾ ಚೈತನ್ಯವೆ. ನಿಮ್ಮ ಆಯ್ಕೆಗಳಲ್ಲಿ ಎಚ್ಚರವಾಗಿರಿ. ನಿಮ್ಮ ಶಕ್ತಿಯ ಮಟ್ಟವನ್ನು ಪರಿಶೀಲಿಸಿಕೊಳ್ಳಿ, ಯಾರನ್ನು ತಾಗುತ್ತಿದ್ದೀರಿ, ಯಾರನ್ನು ಅಪ್ಪುತ್ತಿರುವಿರಿ, ಹೀಗೆಯೇ ಪ್ರತಿಯೊಂದನ್ನೂ ಗಮನಿಸಿರಿ.

ಈಗಲೇ ಏಕೆ ಇದನ್ನು ಮಾಡಬೇಕೆ? ಏನಾಗುತ್ತಿದೆ ಇಲ್ಲಿ? ಭಾರತದಲ್ಲಿ ಅತಿ ಹೆಚ್ಚು ಪ್ರಕಂಪನೆ ಇದೆ. ಬೇರೆ ಇವರ ದೇಶಗಳಿಗಿಂತಲೂ ಇಲ್ಲಿಯ ಆಧ್ಯಾತ್ಮಿಕ ಅಭಿವೃದ್ಧಿಯು ಅತಿ ಹೆಚ್ಚಿನ ಪ್ರಮಾಣದಲ್ಲಿದೆ. ಇಲ್ಲಿಗೆ ಬಂದ ಮೇಲೆ ಇನ್ಯಾವ ಪ್ರದೇಶವೂ ಸರಿಯಲ್ಲವೆನಿಸಿತು. ಈ ಇಡೀ ಭೂಗ್ರಹವೇ ಶಕ್ತಿಯುತವಾಗಿಬಿಟ್ಟಿದೆ, ಏಕೆ ಈ ರೀತಿ ಆಗುತ್ತಿದೆ? ಏಕೆಂದರೆ, 'ಏಕತೆ'ಯು ತನ್ನ ಸ್ವಗೃಹಕ್ಕೆ ತೆರಳಲು ಬಯಸುತ್ತಿದೆ. ನಾವೆಲ್ಲರೂ ಒಂದಾಗುತ್ತಿದ್ದೇವೆ. ನಾವು ಭೌತಿಕ ಶರೀರಧಾರಿಗಳೇ ಆದರೂ ದೈವತ್ವಕ್ಕೇನೂ ಕಡಿಮೆ ಇಲ್ಲ.

ನಿಮ್ಮೊಂದಿಗೆ ನೀವೇ ಒಂದಾಗಿರಿ. ಪರಿಪೂರ್ಣವಾಗಿರಿ. ನಿಮ್ಮ ಭಾವನೆಗಳನ್ನು ಅರ್ಥಮಾಡಿಕೊಂಡು ನಿಮ್ಮ ಸ್ವಂತಿಕೆಯನ್ನು ಧೃಡಪಡಿಸಿಕೊಳ್ಳಿ. ಒಂದು ಅತ್ಯದ್ಭುತ ಸವಾರಿಗೆ ಸಿದ್ಧರಾಗಿರಿ. ಶರಣಾಗುವುದು ನಿಮ್ಮ ಮುಕ್ತ ಹೃದಯವನ್ನು ಸೂಚಿಸುತ್ತದೆ. ನೀವು ಕ್ಷೇಮವಾಗಿಯೇ ಇರುತ್ತೀರಿ ಎಂದು ತಿಳಿದ ಮೇಲೆ ಈ ತೆರನಾದ ಒಂದು ಅವಕಾಶವನ್ನು ಬಿಡಕೂಡದು. ನಿಮ್ಮ ಭಯಗಳನ್ನೂ, ಹಳೆಯ ನಂಬಿಕೆಗಳನ್ನು ತ್ಯಜಿಸಿ, ನಿಮ್ಮ ಸ್ವಂತಿಕೆಯನು ದೈವಕ್ಕೆ ಅರ್ಪಿಸಿರಿ ಇದೊಂದು ಸುವರ್ಣಾವಕಾಶ.

ಜ್ಞಾನೋದಯವಾದಾಗ ಏನಾಗುತ್ತದೆ? ಹಿಂದಿನ ಕಾಲದಲ್ಲಿ ಜ್ಞಾನೋದಯವು ತಕ್ಷಣ ಆಗಿಬಿಡುತ್ತಿತ್ತು. ಅದಕ್ಕೆ ಯಾವ ಸೂಚನೆಯೂ ಇರುತ್ತಿರಲಿಲ್ಲ, ಬಹಳ ಘೋರವಾದ ಅನುಭವದ ನಂತರ, ಶಾಂತಿ ನೆಮ್ಮದಿ ಉಂಟಾಗುತ್ತಿತು. ಆದರೆ, ಈಗಿನ ಕಾಲ ಬಲು ವ'ಂಥ'ರ'ವಾಗಿ, ನೋವಿಲ್ಲದೆ ಹ'ಂತ' ಹ'ಂತ'ವಾಗಿ ಜ್ಞಾನೋದಯವಾಗುತ್ತಿದೆ. ನಿಮ್ಮ ಅಂತರಂಗದಲ್ಲಿರುವ ದ್ವಂದ್ವಗಳನ್ನು ಹೋಗಲಾಡಿಸಬೇಕಷ್ಟೆ.

ಕಡೆಗೆ GCSS ಸಮ್ಮೇಳನವು ಬಹಳಷ್ಟು ನಗೆಯಗದ್ದಲದಿಂದ ಕೂಡಿತ್ತು. ಕೃತಜ್ಞತೆಯ ಮಾತುಗಳನ್ನು PSSMನ ಲಲಿತ ರವರು ಹೇಳಿದರು. ಪ್ರತಿಯೊಬ್ಬರನ್ನು ವಂದಿಸಿ, GCSSನ್ನು ಯಶಸ್ವಿಗೊಳಿಸಿದ ಎಲ್ಲರನ್ನೂ ಅಭಿನಂದಿಸಿದರು. ಎರಿಕ್ ಹಾಗೂ ಜಸ್ಟೀನ್ ಒಂದು ಹೃದಯಂಗಮವಾದ ಹಾಡನ್ನು ಹಾಡಿದರು "I am one with the heart of the mother / father god !!" ಈ ಹಾಡು ಸಭೆಯನ್ನು ಮುಕ್ತಾಯಗೊಳಿಸುವಲ್ಲಿ ಅಚ್ಚುಕಟ್ಟಾಗಿ ಮೂಡಿಬಂದಿತು.

ಶುರುವಾಗಿಬಿಟ್ಟಿದೆ – ಕ್ಷಣಗಣನೆ –<br>ಆಧ್ಯಾತ್ಮಿಕ ವಿಜ್ಞಾನಿಗಳ ಮುಂದಿನ ಜಾಗತಿಕ ಸಮ್ಮೇಳನಕ್ಕೆ,<br>ಸದಸ್ಯರಿಗೆ – ನಮ್ಮೆಲ್ಲರಿಗೆ – ಕ್ಷಣಗಣನೆ<br>ಶುರುವಾಗಿಬಿಟ್ಟಿದೆ ..................

–ಪಿ. ಅಯ್ಯಪ್ಪ ಬೆಂಗಳೂರು<br>ಕನ್ನಡಕ್ಕೆ: ಶ್ರೀನಿವಾಸ, ಬೆಂಗಳೂರು.

# ಯುವ ಲೋಕ

ದೀಪಕ್ ಚೋಪ್ರ ಹೆಸರು ನೀವೆಲ್ಲ ಕೇಳಿರಲೇಬೇಕು. ಇವರು ಬಹುಮುಖ ಪ್ರತಿಭೆಯ ವ್ಯಕ್ತಿ. ಹಲವಾರು ಪುಸ್ತಕಗಳನ್ನು ಬರೆದಿದ್ದಾರೆ. ಇವರು Endocrinology ಯಲ್ಲಿ ಪದವೀಧರರು. ಇವರು ಬರೆದ ಅನೇಕ ಆಧ್ಯಾತ್ಮಿಕ ಪುಸ್ತಕಗಳು ಜಗತ್ ಪ್ರಖ್ಯಾತಿ ಪಡೆದಿವೆ. ಮೊದಲಿಗೆ ಇವರು ಡಾಕ್ಟರ್ ಆಗಿ ಕೆಲಸ ಶುರುಮಾಡಿದರು, ನಂತರ, ಮನಸ್ಸು - ದೇಹ ಸಂಬಂಧಿತವಾದ ಸಮಸ್ಯೆಗಳನ್ನು ಅಧ್ಯಯನ ಮಾಡುತ್ತಾ ಆಯುರ್ವೇದದಲ್ಲಿಯೂ ಸಫಲತೆಯನ್ನು ಪಡೆದಿದ್ದಾರೆ. ದೀಪಕ್ ಚೋಪ್ರ ಇಂದು ನವಯುಗದ ಆಧ್ಯಾತ್ಮಿಕ ನಿಪುಣ. ಬನ್ನಿ ದೀಪಕ್ ಚೋಪ್ರರವರ ಕೆಲವು ತತ್ವಗಳನ್ನು ಪರಿಶೀಲಿಸೋಣ.

**" In the midst of movement and chaos, keep stillness inside of you."**

**"ಹೊರಜಗತ್ತಿನಲ್ಲಿ ಯಾವುದೇ ಚಲನೆ ಹಾಗೂ ಗೊಂದಲಗಳಿದ್ದರೂ, ನಿಮ್ಮ ಅಂತರಂಗದಲ್ಲಿ ಮಾತ್ರ ನಿಶ್ಚಲತೆ/ಸ್ಥಿರತೆಯನ್ನು ಸಾಧಿಸಿರಿ."**

ಯಾವುದೇ ಪರಿಸ್ಥಿತಿಗಳು ನಮ್ಮ ಸುತ್ತಲು ಕಾಣಿಸಿಕೊಂಡರೂ, ನಾವು ಮಾತ್ರ ನಮೊಳಗಿರುವ ಶಾಂತಿಯನ್ನು, ಸ್ಥಿರತೆಯನ್ನು ಕಾಪಾಡಿಕೊಳ್ಳಬೇಕು. ಇದು ನಿಖರವಾಗಿ ಮನಸ್ಸಿನ ಸ್ಥಿತಿಯನ್ನು ಸೂಚಿಸುತ್ತದೆ. ನಮ್ಮ ಅಂತರಾಳದಲ್ಲಿ ನಡೆಯುವ ಪ್ರತಿಯೊಂದು ಸಂಭಾಷಣೆಯೂ ಮನಸ್ಸಿನ ಮೂಲಕ ಆಡುತ್ತದೆ. ಮನಸ್ಸನ್ನು ಮೊದಲು ಮೌನವಾಗಿಸಬೇಕು. ಹೀಗೆ ಮಾಡಬೇಕಾದರೆ, ಧ್ಯಾನವೊಂದೇ ದಾರಿ. ಸ್ಥಿರತೆಯನ್ನು ಸಾಧನದಲ್ಲಿ ಯಾವುದೇ ಪರಿಸ್ಥಿತಿಯಲ್ಲಿಯೂ ನಾವು ದೃಢವಾಗಿ, ಧೈರ್ಯವಾಗಿ ಇರಬಹುದು. ನಾವು ಎದುರಿಸುವ ಸವಾಲುಗಳನ್ನು ಸಮಯೋಚಿತವಾಗಿ ಪರಿಹರಿಸಿಕೊಳ್ಳಲು, ಈ ಆಂತರಿಕ ಸ್ಥಿರತೆಯಿಂದ ಸಾಧ್ಯವಾಗುತ್ತದೆ. ಆದಷ್ಟು ಬೇಗ ನಾವು ಈ ಸ್ಥಿರತೆಯನ್ನು ಅಭ್ಯಾಸ ಮಾಡಿಕೊಳ್ಳಬೇಕು. ಆದರಿಂದ, ನಾವು ಎಲ್ಲ ಸಮಯದಲ್ಲಿಯೂ ವಿಜಯವಂತವಾಗಿಯೇ ಇರುತ್ತೇವೆ.

**"If you are having a single thought of violence or hatred against anyone in the world at this moment, we are contributing to the wounding of the world."**

"ನಮ್ಮಲ್ಲಿ ಹಿಂಸೆಯ ಒಂದೇ ಒಂದು ಆಲೋಚನೆ ಇದ್ದರೂ, ಅದರಿಂದ ನಮ್ಮ ಜಗತ್ತು ಗಾಯಗೊಳ್ಳುವ ಸಂಭವವಿದೆ."

ಆಲೋಚನೆಗಳು ಉಪಾಯಕಾರಿಯಾಗಿರಬೇಕೆ ಹೊರತು ಅಪಾಯಕಾರಿಯಾಗಿರಕೂಡದು. ನಿಮಗೆಲ್ಲ ತಿಳಿದ ಹಾಗೆ ಆಲೋಚನೆಗಳು ಶಕ್ತಿ ತರಂಗಗಳನ್ನು ಹೊಮ್ಮಿಸುತ್ತವೆ. ಅವು ನಮ್ಮಿಂದ ಬಿಡುಗಡೆಯಾಗುತ್ತಲೇ ನಿಧಾನವಾಗಿ ವಾಸ್ತವಿಕತೆಯನ್ನು ಸೃಷ್ಟಿ ಮಾಡುತ್ತಾ ಹೋಗುತ್ತವೆ. ಹಿಂಸೆಯ ಆಲೋಚನೆಗಳು ಕ್ರಮೇಣ ನಿಜ ಸ್ಥಿತಿಗಳಾಗುವ ಸಂಭವವಿದೆ. ದ್ವೇಷ, ಅಸೂಯೆ ಮಾನವ ಕುಲಕ್ಕೆ ಸಮಂಜಸವಲ್ಲ, ಪ್ರತಿಯೊಬ್ಬರೂ ತಮ್ಮ ಮನಸ್ಸುಗಳನ್ನು ಶುದ್ಧೀಕರಿಸುತ್ತ, ಆದರಿಂದ ಸದ್ಭಾವನೆಗಳು ಹೊರಡುವಂತೆ ತರಬೇತಿ ಕೊಡಬೇಕು. ಅಪಾಯಕಾರಿ ಆಲೋಚನೆಗಳಿಂದ ನಮ್ಮ ಪರಿಸರಕ್ಕೆ ಹಾನಿಯುಂಟಾಗುತ್ತದೆ. ನಾವು ಯಾವ ಬೀಜ ಬಿತ್ತುವೆವೋ ನಮಗೆ ಅಂತಹ ಸಸಿಯೇ ಬೆಳೆಯುತ್ತದೆ. ಹಾಗೆಯೇ ದ್ವೇಷವನ್ನು ಬಿತ್ತಿದರೆ, ದ್ವೇಷವೇ ಹುಟ್ಟುತ್ತದೆ. ಸ್ನೇಹವನ್ನು ಬಿತ್ತಿದರೆ, ಸ್ನೇಹವೇ ಹುಟ್ಟುತ್ತದೆ. ಆಲೋಚನೆಗಳನ್ನು ಸಕ್ರಮ/ನಿರ್ಮಲವಾಗಿ ಮಾಡಬೇಕಾದರೆ, ಚಿಕ್ಕಂದಿನಿಂದಲೇ ಅಭ್ಯಾಸ ಮಾಡಬೇಕು. ಇದು ಬಲು ದೀರ್ಘಕಾಲ ನಡೆಯುವಂತಹ ಕ್ರಿಯೆ. ವಯಸ್ಸಾದ ಮೇಲೆ ಇದು ಸ್ವಲ್ಪ ಕಷ್ಟವಾಗುತ್ತದೆ. ಒಮ್ಮೆ ಕಷ್ಟವೆನಿಸಿದರೆ, ಬಹಳಷ್ಟು ಮಂದಿ ಆಲೋಚನೆಗಳನ್ನು ಬದಲಾಯಿಸದೆ, ತಮ್ಮಲ್ಲಿ ಉಂಟಾಗುವ ದುರಾಲೋಚನೆಗಳನ್ನು ಸಮರ್ಥಿಸಿಕೊಳ್ಳಲು ಸಿದ್ಧವಾಗಿಬಿಡುತ್ತಾರೆ. ಆದ್ದರಿಂದ, ನಾವೆಲ್ಲರೂ ಈ ಕೂಡಲೇ ಧ್ಯಾನವನ್ನು ಮಾಡಬೇಕು.

**"The Secret of Attraction is to love yourself. Attractive people judge neither themselves nor others. They are open to gestures of love. They think about love and express their love in every action. They know that love is not a mere sentiment, but the ultimate truth at the heart of the universe."**

"ಆಕರ್ಷಣೆಯ ರಹಸ್ಯ, ನಮ್ಮನ್ನು ನಾವು ಪ್ರೀತಿಸಿಕೊಳ್ಳುವುದೇ. ಆಕರ್ಷಕ ವ್ಯಕ್ತಿಗಳು ಸ್ವತಃ ತಮ್ಮನ್ನೇ ಆಗಲಿ ಅಥವಾ ಇತರರನ್ನೇ ಆಗಲಿ ವಿಮರ್ಶಿಸುವುದಿಲ್ಲ. ಪ್ರೀತಿಯನ್ನು ಸದಾಕಾಲ ಆಹ್ವಾನಿಸುತ್ತಲೇ ಇರುತ್ತಾರೆ. ಪ್ರೇಮ ಪ್ರೀತಿ ಬಗ್ಗೆ ಸದಾ ಆಲೋಚಿಸುತ್ತಲೇ ಇರುತ್ತಾರೆ. ವ್ಯಕ್ತಪಡಿಸುವಾಗಲೂ ಪ್ರೀತಿಯಿಂದಲೇ ವ್ಯವಹರಿಸುತ್ತಾರೆ. ಪ್ರತಿಯೊಂದು ಕೆಲಸದಲ್ಲಿಯೂ ಪ್ರೀತಿಯಿಂದಲೇ ಮಾಡುತ್ತಿರುತ್ತಾರೆ. ಇಂತಹವರಿಗೆ ಪ್ರೇಮ ಪ್ರೀತಿ ಕೇವಲ ಮನೋಭಾವನೆ ಮಾತ್ರವಲ್ಲ, ಅದು ಈ ವಿಶ್ವದೆಲ್ಲೆಡೆ ಹರಡಿರುವ ಪರಮ ಸತ್ಯ."

ಪ್ರತಿಯೊಬ್ಬರು ತಮ್ಮನ್ನು ತಾವೇ ಪ್ರೀತಿಸಿಕೊಳ್ಳಬೇಕು. ಇಲ್ಲವಾದರೆ ಬೇರೆ ಯವರನ್ನು ಹೇಗೆ ಪ್ರೀತಿಸುತ್ತೀರಿ? ಹೇಗೆ ಎಲ್ಲರಿಗೂ ವ್ಯಕ್ತಪಡಿಸುತ್ತೀರಿ? ನೀವು ಸಂಗೀತಗಾರರಲ್ಲದೆ ಇದ್ದರೆ ಹೇಗೆ ಸಂಗೀತವನ್ನು ಹರಡಬಲ್ಲಿರಿ? ಪ್ರೀತಿಯೊಂದೇ ಈ ಜಗತನ್ನು ಆವರಿಸಿದೆ. ನಮ್ಮನ್ನು ನಾವೇ ಅರ್ಥಮಾಡಿಕೊಳ್ಳಲು ಪ್ರೀತಿ ಅತ್ಯಾವಶ್ಯಕ. ಇದು ಧ್ಯಾನದ ಮೂಲಕ ಮಾತ್ರ ಸಾಧ್ಯ. ನಮ್ಮ ಹಳೆಯ ವ್ಯಕ್ತಿತ್ವ ಹಾಗೂ ಹೊಸತನವನ್ನು ಗ್ರಹಿಸುವಲ್ಲಿ ಧ್ಯಾನವು ತುಂಬಾ ಸಹಾಯ ಮಾಡುತ್ತದೆ. ಇದರಿಂದ ಪ್ರೀತಿಯು ಧಾರಾಕಾರವಾಗಿ ಹರಿಯುತ್ತದೆ. ವಿನಾಕಾರಣ ಎಲ್ಲದರ ಬಗ್ಗೆ ತೀರ್ಪು ಕೊಡುವುದನ್ನು ನಿಲ್ಲಿಸುತ್ತೇವೆ. ಪ್ರಕೃತಿಗೆ ಅನುಗುಣವಾಗಿ ಬಾಳುವ ನೈಪುಣ್ಯ ಒದಗಿ ಬರುತ್ತದೆ. ಬೇರೆಯವರನ್ನೇ ಆಗಲಿ, ನಮ್ಮನ್ನು ನಾವೇ ಆಗಲಿ ವಿಮರ್ಶೆ ಮಾಡುವ ದುರಾಭ್ಯಾಸವನ್ನು ತ್ಯಜಿಸುತ್ತೀರಿ. ಇದರಿಂದ ವಿಶ್ವಪ್ರೇಮವು ಹರಡುತ್ತದೆ. ಇದನ್ನೇ ಚೀನಿ ಭಾಷೆಯಲ್ಲಿ ಟಾವೋ(Tao) ಎಂದಿದ್ದಾರೆ. ನಮ್ಮ ಸೃಷ್ಟಿಯನ್ನು ಸುಭದ್ರವಾಗಿ, ಆನಂದ ವಾಗಿಡಲು ಈ ವಿಶ್ವ ಪ್ರೇಮವೇ ಕಾರಣ. ಇದರಿಂದ ಏನನ್ನೂ ಬಯಸದೇ ಇರುವುದೇ ನಿಜವಾದ ಪ್ರೇಮ.

**"Happiness is a continuation of happenings which are not resistant"**

**"ತಡೆ ರಹಿತವಾಗಿ ಮುಂದುವರೆಯುವ ಘಟನೆಗಳೇ ನಿಜವಾದ ಸಂತೋಷ/ ಆನಂದ."**

ಜೀವನದಲ್ಲಿ ನಡೆಯುವ ಘಟನೆಗಳನ್ನು ತಡೆಯದೆ ಅವುಗಳನ್ನು ಪೂರ್ಣ ರೀತಿಯಲ್ಲಿ ಒಪ್ಪಿಕೊಳ್ಳುವುದರಲ್ಲೇ ನಿಜವಾದ ಆನಂದ ಇದೆ. ಇದೇ ಆನಂದದ ರಹಸ್ಯ. ನೀರು ಹರಿಯುವಾಗ ಅದಕ್ಕೆ ಯಾವ ತಡೆಯೂ ಇಲ್ಲದಿದ್ದಾಗ ಅದು ಸುಲಭವಾಗಿ ಸಾಗರವನ್ನು ಸೇರುತ್ತದೆ. ಅದನ್ನು ತಡೆದಾಗ ಅದರ ನೈಜತೆಯನ್ನು/ ಸಹಜತೆಯನ್ನು ಕಳೆದುಕೊಳ್ಳುತ್ತದೆ. ಎಲ್ಲವನ್ನೂ ಸಹಜವಾಗಿಯೇ ಹರಿಯಲು ಬಿಡಬೇಕು. ಯಾವುದನ್ನಾದರೂ ತಡೆಗಟ್ಟಬೇಕೆಂದರೆ, ಅದು ಅಜ್ಞಾನದಿಂದಲೇ ಸಾಧ್ಯ, ಅದು ಆತ್ಮಜ್ಞಾನದ ಅಭಾವದಿಂದಲೇ ಉಂಟಾಗಿರುತ್ತದೆ. ನಾವು ಬಾಳಿನಲ್ಲಿ ಆನಂದದಿಂದಿರಬೇಕಾದರ? ಜೀವನದ ಆಗು ಹೋಗುಗಳನ್ನು ಸಹಜವಾಗಿ ಹರಿಯಲು ಬಿಡಬೇಕು. ಇದು ಕೂಡಾ ಟಾವೋ(Tao) ತತ್ವದ ಇನ್ನೊಂದು ಸೂತ್ರ. ಕರ್ಮಗಳನ್ನು ತಡೆಯುವುದರಿಂದ, ನಮ್ಮ ದೈವೀ ಪ್ರಭೆಯಲ್ಲಿ ತೊಡಕುಗಳುಂಟಾಗಿ ನಮ್ಮ ಆಧ್ಯಾತ್ಮಿಕ ಏಳಿಗೆಯಲ್ಲಿ ತೊಂದರೆಯಾಗುತ್ತದೆ. ಚಿಕ್ಕ ವಯಸ್ಸಿನಿಂದಲೇ ಇದನ್ನು ಅರ್ಥ



ಮಾಡಿಕೊಂಡರೆ, ನಾವು ಇಂತಹ ಉತ್ತಮ ಜೀವನ ಶೈಲಿಯನ್ನು ಸಾಕಾರಾಗೊಳಿಸಿಕೊಳ್ಳಬಹುದು. ಹಾಗೂ ಆಧ್ಯಾತ್ಮಿಕವಾಗಿ ಬಹಳ ಎತ್ತರಕ್ಕೆ ಬೆಳೆಯಬಹುದು.

**"Nothing is more important than reconnecting with your bliss. Nothing is as rich. Nothing is more real."**

**"ನಮ್ಮ ಅಂತರಾಳದಲ್ಲಿ ಸದಾ ಅನಂತವಾಗಿರುವ ಆನಂದದ ಜೊತೆ ಸಂಪರ್ಕವನ್ನು ಹೊಂದಿರುವುದೇ ಎಲ್ಲದಕ್ಕಿಂತಲೂ ಮುಖ್ಯ. ಇದಕ್ಕಿಂತ ಶ್ರೀಮಂತಿಕೆಯ ವಿಷಯ ಇನ್ನೊಂದಿಲ್ಲ, ಈ ಆನಂದಕ್ಕಿಂತಲೂ ನಿಜವಾದ ಸತ್ಯ ಇನ್ನೊಂದಿಲ್ಲ."**

ನಾವು ದೇಹವಲ್ಲ, ದೇಹಿಗಳು. ಅಂದರೆ, ದೇಹದಲ್ಲಿ ಇರುವವರು. ಈ ಭೂಮಿಯ ಅನುಭವವನ್ನು ಪಡೆಯುವುದೇ ನಮ್ಮ ಜೀವನದ ಮುಖ್ಯ ಉದ್ದೇಶವಾಗಿದೆ. ಮುಗಿಸದೇ ಉಳಿಸಿರುವ ಕೆಲಸವನ್ನು ಮುಗಿಸಲು ಇಲ್ಲಿಗೆ ಬರುತ್ತೇವೆ. ಅನುಭವದ ಮೂಲಕ ಎಲ್ಲಾ ಜ್ಞಾನವನ್ನು ಪಡೆಯುತ್ತೇವೆ. ಅಂತಿಮವಾಗಿ ನಾವು ಪಡುವ ಎಲ್ಲಾ ಕಷ್ಟಗಳು ನಮ್ಮ ನಿಜ ಸ್ವರೂಪವನ್ನು ತಿಳಿಯುವ ಸಲುವಾಗಿಯೇ ಬರುತ್ತವೆ. ಆನಂದವೇ ನಮ್ಮ ನಿಜ ಸ್ವರೂಪ. ಈ ಸ್ಥಿತಿಯು ಬಹಳ ಶ್ರೇಷ್ಠ ಹಾಗೂ ಶ್ರೀಮಂತ ಸ್ಥಿತಿ. ಇದು ನಿಜವಾದ ಸ್ಥಿತಿ. ನಮ್ಮ ಪ್ರತಿಯೊಂದು ಅನುಭವವೂ ನಮ್ಮ ಆತ್ಮೋನ್ನತಿಗೆ ಸಹಕರಿಸುತ್ತದೆ. ಆನಂದದ ಸ್ಥಿತಿಯಲ್ಲಿ ನಾವು ಎಲ್ಲ ಪರಿಸ್ಥಿತಿಗಳನ್ನೂ, ಜನರನ್ನೂ ತಾರತಮ್ಯವಿಲ್ಲದೆ ಒಪ್ಪಿಕೊಳ್ಳುತ್ತೇವೆ. ಕಾರಣವಿಲ್ಲದೆ ಯಾವುದೂ ಆಗುವುದಿಲ್ಲ, ಇದನ್ನು ಅರ್ಥ ಮಾಡಿಕೊಂಡಾಗ ಭೂಮಿಯ ಮೇಲೆ ನಮ್ಮ ಜೀವನ ನಗುವಿನಿಂದ ತುಂಬಿಹೋಗುತ್ತದೆ, ಆನಂದಭರಿತವಾಗುತ್ತದೆ. ಬನ್ನಿ ದೀಪಕ್ ಚೋಪ್ರರವರನ್ನು ಹೃತ್ಪೂರ್ವಕವಾಗಿ ಅಭಿನಂದಿಸೋಣ. ನಮ್ಮ ಹೃದಯಗಳಲ್ಲಿ ಪ್ರೇಮದ ನದಿಯನ್ನು ಹರಿಸಿದ ನವಯುಗ ಆತ್ಮಜ್ಞಾನಿಗೆ ಕೃತಜ್ಞತೆಯನ್ನು ಸಲ್ಲಿಸೋಣ.

- ಪಿ.ಅಯ್ಯಪ್ಪ, ಬೆಂಗಳೂರು



ಓಶೋ

# ಪ್ರಾಣಿಗಳು ನಮ್ಮ ಅಣ್ಣತಮ್ಮಂದಿರು ಮತ್ತು ಅಕ್ಕತಂಗಿಯರು.



ತಿನ್ನುವ ಉದ್ದೇಶದಿಂದ ಒಂದು ಪ್ರಾಣಿಯನ್ನು ಕೊಲ್ಲಬೇಕು ಎಂಬ ಭಾವನೆಯೇ ಒಂದು ಅಸೌಂದರ್ಯವಾದ, ಅಭಿರುಚಿಯಿಲ್ಲದ ಆಲೋಚನೆಯಾಗಿದೆ.

ಒಂದು ಪ್ರಾಣಿಯು ಸಾಯಿಸಲ್ಪಡುತ್ತಿದೆ ಎಂಬ ಕಾರಣಕ್ಕೆ ನಾನು ಅದನ್ನು ವಿರೋಧಿಸುತ್ತಿಲ್ಲ... ಪ್ರಾಣಿಯಲ್ಲಿ ಅಗತ್ಯವಿರುವುದು ಉಳಿಯುತ್ತದೆ, ಅನಗತ್ಯವಾದುದು ಸಾಯುತ್ತದೆ ಎಂಬ ಕಾರಣಕ್ಕೆ ನಾನು ಅದನ್ನು ವಿರೋಧಿಸುತ್ತಿಲ್ಲ, ನೀವು ಅದನ್ನು ಸಾಯಿಸುತ್ತೀರೋ ಅಥವಾ ಇಲ್ಲವೋ, ಅದು ಬೇರೆ ಮಾತು, ಅದಂತೂ ಕೊನೆಗೆ ಸತ್ತೇ ಸಾಯುತ್ತದೆ. ಹಾಗಾಗಿ, ಅದೂ ಸಹ ನನಗೆ ಅಪ್ರಸ್ತುತ, ಈ ಅಂಶವು ನನಗೆ ಪ್ರಧಾನವಾಗುವುದಿಲ್ಲ.

ನೀವು ಪ್ರಾಣಿಯನ್ನು ಕೊಂದಿದ್ದೀರಿ ಮತ್ತು ಕೊಲ್ಲುವುದು ಸರಿಯಲ್ಲ ಎಂಬುದು ಇಲ್ಲಿನ ಪ್ರಶ್ನೆ ಅಲ್ಲ. ಇಲ್ಲಿರುವ ಪ್ರಶ್ನೆ ಏನೆಂದರೆ, ಸುಂದರವಾದ ಸಸ್ಯಾಹಾರವು ಲಭ್ಯವಿರಬೇಕಾದರೆ, ಪ್ರಾಣಿಯನ್ನು 'ನೀವು' ಕೊಂದಿದ್ದೀರಿ... 'ನೀವು'. ಕೇವಲ ತಿನ್ನುವುದಕ್ಕೋಸ್ಕರವಾಗಿ ಕೊಂದಿದ್ದೀರಿ!.

ಸಸ್ಯಾಹಾರವು ಲಭ್ಯವಿಲ್ಲದಿದ್ದರೆ, ಆ ಪ್ರಶ್ನೆಯೇ ಬೇರೆ, ಆ ಸಂದರ್ಭವೇ ಬೇರೆ. ಆದರೆ, ಅಂತಹ ಆಹಾರವು ಲಭ್ಯವಿದೆ. ಮತ್ತೆ ಯಾಕೆ? ಮತ್ತೆ ಯಾಕೆ ಒಂದು ದೇಹವನ್ನು ನಾಶಮಾಡಬೇಕು? ನೀವು ಒಂದು ಪ್ರಾಣಿಯನ್ನು ಕೊಲ್ಲಬಹುದಾದರೆ, ನೀವು ನರಭಕ್ಷಕರಾಗಬಾರದೇಕೆ? ಮನುಷ್ಯನನ್ನು ಕೊಲ್ಲುವುದರಲ್ಲಿ ತಪ್ಪೇನಿದೆ? ನಿಮ್ಮಂತಹ ಮನುಷ್ಯ ದೇಹದ ಮಾಂಸವು ನಿಮಗೆ ಹೆಚ್ಚು ಸರಿಹೊಂದುತ್ತದೆಯಲ್ಲವೆ? ಯಾಕೆ ಮಾನವ ಜೀವಿಗಳನ್ನು ತಿನ್ನುವುದನ್ನು ಆರಂಭಿಸಬಾರದು?

ಪ್ರಾಣಿಗಳು ಮಾನವನ ಅಣ್ಣತಮ್ಮಂದಿರು ಮತ್ತು ಅಕ್ಕತಂಗಿಯರು, ಏಕೆಂದರೆ, ಮಾನವನು ಪ್ರಾಣಿಗಳಿಂದ ವಿಕಾಸಹೊಂದಿದ್ದಾನೆ. ಅವು ನಮ್ಮ ಕುಟುಂಬದ ಸದಸ್ಯರಿದ್ದಂತೆ. ಒಬ್ಬ ಮನುಷ್ಯನನ್ನು ಕೊಲ್ಲುವುದು ಎಂದರೆ, ಕೇವಲ ಒಂದು ವಿಕಾಸಗೊಂಡ ಪ್ರಾಣಿಯನ್ನು ಕೊಂದಂತೆ. ಒಂದು ಪ್ರಾಣಿಯನ್ನು ಕೊಲ್ಲುವುದು ಎಂದರೆ, ಇನ್ನೂ ವಿಕಾಸವಾಗದ ಯಾವುದೋ ಒಂದನ್ನು ಕೊಂದಂತೆ... ಆದರೆ, ಅದು ತನ್ನ ಮಾರ್ಗದಲ್ಲಿ ಮುನ್ನಡೆಯುತ್ತಿತ್ತು... ಅಂದರೆ, ಅದೇ ಅರ್ಥ!

ಪ್ರಾಥಮಿಕ ಶಾಲೆಯಲ್ಲಿದ್ದಾಗಲೇ ಒಂದು ಮಗುವನ್ನು ಕೊಲ್ಲುವುದಕ್ಕೂ, ಅದೇ ಮಗುವು ಬೆಳೆದು ಪ್ರೌಢವಾಗಿ ವಿಶ್ವವಿದ್ಯಾಲಯದ ಮಟ್ಟಕ್ಕೆ ಬಂದಾಗ ಅದನ್ನು ಕೊಲ್ಲುವುದಕ್ಕೂ ಹೆಚ್ಚಿನ ವ್ಯತ್ಯಾಸವೇನಿಲ್ಲ. ಪ್ರಾಣಿಗಳು ಮನುಷ್ಯರಾಗುವತ್ತ ಪ್ರಯಾಣಿಸುತ್ತಿವೆ ಮತ್ತು ಮಾನವರು ಈ ಹಿಂದೆ ಪ್ರಾಣಿಗಳೇ ಆಗಿದ್ದರು. ಇದೊಂದು ಅಭಿರುಚಿಯ ಪ್ರಶ್ನೆ ಮಾತ್ರ.

ನಿಮ್ಮ ಪತ್ನಿಯನ್ನು ನೀವು ಏಕೆ ಕೊಂದು ತಿನ್ನಬಾರದು? ಆಕೆಯು ಅಷ್ಟೊಂದು ಸುಂದರವಾಗಿದ್ದಾಳೆ ಮತ್ತು ಸುಮಧುರವಾಗಿದ್ದಾಳೆ! ನಿಮ್ಮ ತಾಯಿಯನ್ನು ನೀವು ಏಕೆ ತಿನ್ನಬಾರದು? ನಿಮ್ಮ ಗಂಡನನ್ನು ಅಥವಾ ನಿಮ್ಮ ಮಗುವನ್ನೇ ಏಕೆ ನೀವು ತನ್ನಬಾರದು... ಎಷ್ಟೊಂದು ರುಚಿಕರವಾಗಿರುತ್ತದೆಯಲ್ಲವೇ?

ಇಲ್ಲಿ ಪ್ರಶ್ನೆ ಇರುವುದು ಧಾರ್ಮಿಕತೆಯ ಬಗ್ಗೆ ಅಲ್ಲವೇ ಅಲ್ಲ, ಇಲ್ಲಿ ಮತ್ತೊಮ್ಮೆ ನಾನು ನಿಮಗೆ ನೆನಪಿಸಬಯಸುತ್ತೇನೆ, ಇದೊಂದು ಸೌಂದರ್ಯಾಭಿರುಚಿಯ ಪ್ರಶ್ನೆಯಾಗಿದೆ. ಸುಂದರವಾದ ಅಭಿರುಚಿಯುಳ್ಳ ಮನುಷ್ಯನೊಬ್ಬ ಜೀವನವು ಸುಮಧುರವಾಗಿ ಇರುವಂತೆ ನಡೆದುಕೊಳ್ಳುತ್ತಾನೆ. ಆಗ ಆತನ ಜೀವನವು ಕರಾಳ ಅಥವಾ ಕುರೂಪಗೊಳ್ಳುವುದಿಲ್ಲ.

ಸಂತ ಫ್ರಾಂಸಿಸ್ ಕುರಿತ ಕಥೆಗಳು ಇವೆ. ಪಕ್ಷಿಗಳು ಆತನ ಹೆಗಲ ಮೇಲೆ ಬಂದು ಕುಳಿತುಕೊಳ್ಳುವ ಮತ್ತು ನದಿಯಲ್ಲಿನ ಮೀನುಗಳು ಆತನನ್ನು ನೋಡಲು ನದಿಯಿಂದ ಹೊರಗೆ ಜಿಗಿಯುವ ಪ್ರಸಂಗಗಳು ಆ ಕಥೆಗಳಲ್ಲಿ ಉಲ್ಲೇಖಿಗೊಂಡಿವೆ! ಪ್ರಾಣಿ ಜಗತ್ತಿನೊಡನೆ ಆತನು ಒಂದು ರೀತಿಯ ಆಪ್ತತೆಯನ್ನು ಹೊಂದಿದ್ದನು. ಸಹೋದರಿಯರೇ ಎಂದು ಸಂಬೋಧಿಸಿ, ಆತನು ಮರಗಳೊಡನೆ ಮಾತನಾಡುತ್ತಿದ್ದನು ಮತ್ತು ಸಹೋದರರೇ ಎಂದು ಹೇಳುತ್ತಾ ಪಕ್ಷಿಗಳೊಂದಿಗೆ, ಸೂರ್ಯನೊಂದಿಗೆ ಮತ್ತು ಚಂದ್ರನೊಡನೆ ಸಹ ಮಾತನಾಡುತ್ತಿದ್ದ.

– ಕನ್ನಡಕ್ಕೆ: ಎ.ಸತ್ಯನಾರಾಯಣ.

(ಈ ಲೇಖನ ಭಾಗವನ್ನು, ಓಶೋ ವಿರಚಿತ ಮತ್ತು ತಾವೋ ಪಬ್ಲಿಷಿಂಗ್ ಪ್ರೈ. ಲಿ. ಇವರು ಪ್ರಕಟಿಸಿರುವ, ''ದ ಡೈಮಂಡ್ ಸೂತ್ರ'' ಎಂಬ ಪುಸ್ತಕದಿಂದ ಕೃತಜ್ಞತಾಪೂರ್ವಕವಾಗಿ ಆಯ್ದುಕೊಳ್ಳಲಾಗಿದೆ)

## ವಿನೂತನ ಧ್ಯಾನ ಪ್ರಚಾರ

ಸಿರಿಗುಪ್ಪ ಶ್ರೀ ಕೃಷ್ಣ ಪಿರಮಿಡ್ ಧ್ಯಾನ ಕೇಂದ್ರದಲ್ಲಿ ಶ್ರೀಮತಿ ರೇವತಿ ಮೇಡಮ್‌ರವರ ವಿನೂತನ ಧ್ಯಾನ ಪ್ರಚಾರ. ಅವರು ಕಲಿಸುವ ಕಸೂತಿ, ಟೈಲರಿಂಗ್, ಹ್ಯಾಂಡ್‌ವರ್ಕ್ ಇತ್ಯಾದಿ ಕಲಿಸಲು ಅವರು ಕೇಳುವ ಶುಲ್ಕ '1 ಗಂಟೆ ಧ್ಯಾನ'.



# ಪಿರಮಿಡ್ ಧ್ಯಾನ/ ವೈದ್ಯ ಸಂಜೀವಿನಿ ವೈದ್ಯ

ಪಿರಮಿಡ್‌ಗಳು ನಮ್ಮ ಭೂಮಿಯ ಮೇಲೆ ಸಾವಿರಾರ ವರ್ಷಗಳ ಹಿಂದೆಯೇ ನಿರ್ಮಿಸಲಾಗಿತ್ತು. ಇವುಗ ಳ ನಿರ್ಮಾಣದ ಉದ್ದೇಶವೇನೆಂದರೆ ನಮ್ಮೊಳಗೆ ನಿದ್ರಾವಸ್ಥೆಯಲ್ಲಿರುವ ದೇವರನ್ನು ಮೆಲ್ಲನೆ ತಟ್ಟಿ ಎಚ್ಚರ ಗೊಳಿಸಬೇಕೆಂದು ಪಿರಮಿಡ್ ಚಿಹ್ನೆಯು ದೈವವನ್ನು ಸೂಚಿಸುತ್ತದೆ. ನಮ್ಮ ದೇಹದ ಪ್ರತಿಯೊಂದು ಕಣದಲ್ಲಿಯೂ ಇರುವ ಜೀವರಸವು ಪಿರಮಿಡ್ ಆಕಾರದಲ್ಲಿಯೇ ಇದೆ. ವಿಜ್ಞಾನಿಗಳು ಹೇಳುವಂತೆ (ನ್ಯೂಕ್ಲಿಯಸ್) ಜೀವಾಣುವಿನ ಆಕಾರ ಗುಂಡಾಗಿ ಇಲ್ಲ.

ಇತಿಹಾಸವೇ ಸೂಚಿಸುವಂತೆ ಪಿರಮಿಡ್ ಎಂಬ ಪದವು ಗ್ರೀಕ್ ಮೂಲದ ಪೈರಿ (ಅಂದರೆ ಅಗ್ನಿ) ಎಂದು ಅರ್ಥ. ಈ ಚಿಹ್ನೆಯು ದೈವೀ ಪ್ರಕಾಶ/ಬೆಳಕು ಜೀವನದ ಆಧಾರವಾಗಿರುವ ಪ್ರಮುಖ ತತ್ವ ಎಂದು ಅರ್ಥ. ಸಾವಿರಾರು ವರ್ಷಗಳಿಂದ ಎಲ್ಲರನ್ನು ಕುತೂಹಲ ಪಡಿಸುತ್ತಿರುವ ಕಟ್ಟಡ ಈ ನಾಲ್ಕು ಕೋನಗಳ ಪಿರಮಿಡ್. ಈ ಅದ್ಭುತ ನಿರ್ಮಾಣಗಳನ್ನು ನೋಡುತ್ತಿದ್ದರೆ ಅವು ನಮ್ಮನ್ನು ಹತ್ತಿರ ಕರೆಯುತ್ತವೆ. ತಮ್ಮೊಳಗಿರುವ ಅಪಾರವಾದ ಶಕ್ತಿಯನ್ನು ಮಾನವ ಕುಲದ ಉದ್ಧಾರಕ್ಕಾಗಿ ವಿನಿಯೋಗಿಸಿರಿ ಎಂದು "ಹೇಳುವಂತೆ ಕಾಣುತ್ತದೆ. ನಿಜವಾಗಿಯೂ ಇದೇ ಅದರ ನಿರ್ಮಾಣದ ಮುಖ್ಯ ಉದ್ದೇಶ.

ಪಿರಮಿಡ್‌ಗಳು ನೆಗೆಟಿವ್ ಐಯಾನ್ಸ್ ಅಂದರೆ ವಿದ್ಯುದ್ವಾಹಿ ಕಣಗಳನ್ನು ಉತ್ಪತ್ತಿ ಮಾಡುತ್ತದೆ.

ಇವು ಮನುಷ್ಯನ ಶರೀರವನ್ನು ಎಲ್ಲಾ ರೀತಿಯ ಉಪದ್ರವಗಳಿಂದ ಖಾಯಿಲೆಗಳಿಂದ ಬೇಗ ಗುಣಪಡಿಸುತ್ತದೆ. ನೆಗೆಟಿವ್ ಐಯಾನ್ಸ್ ಶರೀರಕ್ಕೆ ಬಹಳ ಅವಶ್ಯ. ನೀರು ಹಾಗೂ ಗಾಳಿಯ ಮೂಲಕ ಇದು ನಮ್ಮ ಶರೀರದೊಳಕ್ಕೆ ಸೇರಿ, ರಕ್ತದ ಮೂಲಕ ಎಲ್ಲೆಡೆ ಹರಿಯುತ್ತದೆ. ಬಹಳಷ್ಟು ಪಾಸಿಟೀವ್ ಐಯಾನ್ಸ್‌ನಿಂದ ಮನುಷ್ಯ ಖಿನ್ನತೆ (**depression**)ಗೆ ಒಳಗಾಗುತ್ತಾನೆ. ಹಾಗೆಯೇ ಇತರ ತೊಂದರೆಗಳು ಉಂಟಾಗುತ್ತದೆ. ಆದರೆ ನೆಗೆಟಿವ್ ಐಯಾನ್ಸ್ ದೇಹವನ್ನು ಸದೃಢವಾಗಿ ಕಾಪಾಡುತ್ತವೆ. ಪಿರಮಿಡ್ ನಮ್ಮ ದೇಹದ ವಿದ್ಯುತ್ ಕಾಂತ ಕ್ಷೇತ್ರವನ್ನು ಸಮನಾಗಿ ಕಾಪಾಡಿಕೊಂಡು ಬರುತ್ತದೆ.

ಪಿರಮಿಡ್ ಯಾವುದೆ ಪದಾರ್ಥದ ಗುಣಧರ್ಮವನ್ನು ಹಾಗೂ ನಿರ್ಮಾಣದ ರಚನೆಯನ್ನು ಬದಲಾಯಿಸುತ್ತದೆ (ಯಾವುದೇ ಜೀವರಾಶಿ, ಖನಿಜ ಅಥವಾ ಜೀವಂತ ಪದಾರ್ಥ ). ಕ್ಲಿಮೆಂಕೋ ಹಾಗೂ ಡಾ. ನೋಸಿಕ್ , **Ivanovskii institute of virology** (ರಷಿಯನ್ ಅಕಾಡಮಿ ಆಫ್ ಮೆಡಿಕಲ್ ಸೈನ್ಸ್ ನ ಒಂದು ವಿಭಾಗ ) ಇವರು ಪಿರಾಮಿಡ್‌ನಿಂದ ರೋಗ ನಿರೋಧಕ ಶಕ್ತಿಯನ್ನು ಪ್ರಭಾವಿಸುವ ಶಕ್ತಿ ಯನ್ನು ಧೃಢೀಕರಿಸಿದ್ದಾರೆ. ಈ ಕಣಗಳು ದೇಹದಲ್ಲೆಲ್ಲಾ ಹರಡಿರುತ್ತವೆ. ಇದಕ್ಕೆ ಇನ್ನೊಂದು ಹೆಸರು ಹಿಮೋಗ್ಲೋಬಿನ್. ಇದು ಸೋಂಕು ವೈರಸ್ ಹಾಗೂ ಬ್ಯಾಕ್ಟೀರಿಯಾದಿಂದ ನಮ್ಮನ್ನು ಕಾಪಾಡುತ್ತದೆ. ಈ ಸಂಶೋಧಕರು ವಿನೋ ಗ್ಲೋಬಿನ್ ಎಂಬ ಕಣವನ್ನು ಪಿರಮಿಡ್ ಒಳಗೆ ಇರಿಸಲಾಯಿತು. ಅದಾದ ಮೇಲೆ **encepholomia carditis** ಎಂಬ ವೈರಸ್ಸನ್ನು ಇಲಿಯಿಂದ (**Rat**) ಶೇಖರಿಸಿ ವೆನೋಗ್ಲೋಬಿನ್ ಅಣುವಿನ ಜೊತೆ ಸೇರಿಸಿ ಪಿರಮಿಡ್‌ನಲ್ಲಿ ಇಡಲಾಯಿತು. ಹಾಗೆಯೇ ಪಿರಮಿಡ್‌ನಲ್ಲಿ ಇಡದೇ ಇರುವಂತಹ ಇಮ್ಯುನೋ ಗ್ಲೋಬಿನ್ ಜೊತೆಯು ಈ ವೈರಸ್ಸನ್ನು ಬೆರೆಸಿ ಬೇರೆ ತಟ್ಟೆಯಲ್ಲಿ ಇಡಲಾಯಿತು. ನಮ್ಮ ನಂಬಿಕೆಗೆ ಅನುಗುಣವಾಗಿ, ಪಿರಮಿಡನಲ್ಲಿ ಬಹಳಷ್ಟು ದಿನ ಇರಿಸಲಾಗಿದ್ದ ಇಮ್ಯುನೋ ಗ್ಲೋಬಿನ್‌ನಲ್ಲಿ ರೋಗನಿರೋಧಕ ಶಕ್ತಿ ಅತೀ ಹೆಚ್ಚು ಇರುವ ಕಾರಣ ಈ ಸೋಂಕನ್ನು(ವೈರಸ್) ಮೂರು ಪಟ್ಟು ಹೆಚ್ಚು ತಡೆಯುವಲ್ಲಿ ಯಶಸ್ವಿಯಾಯಿತು. ಇದರಿಂದ ಸಾಬೀತಾಗಿದ್ದೇನೆಂದರೆ ಪಿರಮಿಡ್‌ಗೆ ನಮ್ಮ ದೇಹದ ರೋಗನಿರೋಧಕ ಶಕ್ತಿಯನ್ನು ಹೆಚ್ಚಿಸುವ ಸಾಮರ್ಥ್ಯವಿದೆ ಎಂದು.

ಪಿರಮಿಡ್ ಮುಪ್ಪಾಗುವುದನ್ನು ತಡೆಗಟ್ಟುತ್ತದೆ. ದೇಹದ ಕಾಂತಿಯನ್ನು ಹೆಚ್ಚಿಸಿ ತ್ವಚೆಯನ್ನು ಆರೋಗ್ಯವಾಗಿಡುತ್ತದೆ. ಜೀವಾಣುಗಳ ಮೇಲೆ ಪರಿಸರದ ದುಷ್ಪರಿಣಾಮವನ್ನು ಸೋಕದಂತೆ ಸಹಾಯ ಮಾಡುತ್ತದೆ.

ಪ್ರೋ. ಎ. ಜಿ. ಆಂಟೋನವ್ ರವರ ರಷ್ಯಾದ ತಂಡ ಮಾಡಿದ ಸಂಶೋಧನೆ ಬಲು ಕುತೂಹಲ ಕಾರಿಯಾಗಿದೆ. ಇವರು ಮಕ್ಕ ತಜ್ಞರು ಗ್ಲುಕೋಸ್‌ನ್ನು ಇಂಜೆಕ್ಷನ್ ಮೂಲಕ ನೀಡಿದಾಗ ಹಾಗೂ ಡಿಸ್ಟಿಲ್ಡ್ ವಾಟರ್‌ನ್ನು (ಪಿರಮಿಡ್‌ನಲ್ಲಿ ಇಟ್ಟು ತೆಗೆದ ನಂತರ) ಮಕ್ಕಳಿಗೆ ಕುಡಿಸಲಾಯಿತು. ಸುಮಾರು ಇಪ್ಪತ್ತು ಆಗಲೇ ಹುಟ್ಟಿದ ಶಿಶುಗಳಿಗೆ ಅದರಲ್ಲೂ ಸ್ವಲ್ಪ ಕಡಿಮೆ ಆರೋಗ್ಯ/ ದುರ್ಬಲವಾದ ಶಿಶುಗಳಿಗೆ ಇದನ್ನು ಕುಡಿಸಲಾಯಿತು. ಪರೀಕ್ಷಿಸಿ ನೋಡಿದಾಗ, ಪಿರಮಿಡ್ ನೀರನ್ನು ಕುಡಿದ ದುರ್ಬಲ ಮಕ್ಕಳು ಆರೋಗ್ಯದಲ್ಲಿ ಈಗ ಬಹಳ ಸುಧಾರಿಸಿಕೊಂಡಿದ್ದರು.

ರಷ್ಯಾದ ಒಂದು ಕಾರಾಗೃಹದಲ್ಲಿ 5000 ಕೈದಿಗಳಿಗೆ ಪಿರಮಿಡ್‌ನೀರನ್ನು ಕುಡಿಸಲಾಯಿತು. ಸ್ವಲ್ಪ ದಿ ಕಳೆದಂತೆ ಆ ಕೈದಿಗಳಲ್ಲಿ ಇದ್ದ ಕ್ರೂರ ಪ್ರವೃತ್ತಿ ಕಡಿಮೆಯಾಗಿತ್ತು.

ಇದೇ ರೀತಿ ಕುಡಿತ ಹಾಗೂ ಡ್ರಗ್ಸ್ ದುಶ್ಚಟಕ್ಕೆತುತ್ತಾಗಿರುವವರಿಗೆ ಈ ಪಿರಮಿಡ್ ನೀರನ್ನು ಕುಡಿಸಿದಾಗ, ಅವರಲ್ಲಿ ಮನೋನಿಶ್ಚಲತೆ ಉಂಟಾಗಿ, ಬಹಳಷ್ಟು ಸುಧಾರಣೆ ಕಾಣಿಸಿಕೊಂಡಿತು. ಇತಿಹಾಸದಲ್ಲಿ ವಿವರಗಳು ಸಿಕ್ಕಿರುವಂತೆ ಉತ್ತಮ ರೀತಿಯಲ್ಲಿ ಗುಣಪಡಿಸಲಾಗಿರುವ ಹಲವಾರು ರೋಗಗಳಲ್ಲಿ ಏಡ್ಸ್, ಅಸ್ತಮಾ, ಕೀಲು ನೋವು, ಗಮನವಹಿಸಲು ಕಷ್ಟವಾಗಿರುವ ತೊಂದರೆ, ಕ್ಯಾನ್ಸರ್, ನಿಶ್ಶಕ್ತಿ, ಮಾದಕ ಪದಾರ್ಥ ಸೇವನೆ (ಡ್ರಗ್) ಡಿಸ್ಲೆಕ್ಸಿಯಾ, ಡಯಾಬಿಟಿಸ್, ಖಿನ್ನತೆ, ಮಾಂಸ ಖಂಡಗಳಲ್ಲಿ ಬಾಧೆ, ಮ್ಯಾಲಜಿಯಾ, ಪ್ಯಾರಾಲಿಸಿಸ್, ಪೋಲಿಯೋ, ಸಿಜೋಫ್ರೇನಿಯಾ ಹಾಗೂ ಹರ್ನಿಯಾ. ಪಿರಮಿಡ್ ಕೆಳಗೆ ಮಲಗುವುದರಿಂದ ಸಾಮಾನ್ಯವಾಗಿ ಉಂಟಾಗುವ ಕೆಮ್ಮು, ನೆಗಡಿ ಆಗುವುದಿಲ್ಲ.

ಸಿಕಂದ್ರಾ ಬಾದ್ ನ ಸಂಜೀವ್ ಅಭಿಷೇಕ್ ರಾವ್ ಪಿರಮಿಡ್ ಶಕ್ತಿಯ ಮೂಲಕ **Retinasis pigmentosa** ಎಂಬ ಕಾಯಿಲೆಯನ್ನು ಪೂರ್ತಿಯಾಗಿ ಗುಣಪಡಿಸಿದ್ದಾರೆ. ಅವರ ಪ್ರಕಾರ ಈ ತೊಂದರೆಯನ್ನು ಪಿರಮಿಡ್‌ನಲ್ಲಿ ಅಲ್ಲದೆ ಪ್ರಪಂಚದಲ್ಲಿ ಬೇರೆಲ್ಲೂ ಗುಣಪಡಿಸಲು ಸಾಧ್ಯವಿಲ್ಲ.

ನಮ್ಮ ದೇಹದಲ್ಲಿ ಉಂಟಾಗಿರುವ ನೆಗೆಟಿವ್ ವೈಬ್ರೇಶನ್ ಪಿರಮಿಡ್ ಪ್ರಭಾವದಿಂದ ಪಾಸಿಟಿವ್ ವೈಬ್ರೇಸನ್ ಆಗಗಿ ಪರಿವರ್ತಿಸಲಾಗುತ್ತದೆ. ಈ ರೀತಿ ಆದಾಗ ದೇಹದಲ್ಲಿರುವ ತೊಡಕುಗಳು ನಿವಾರಣೆಯಾಗುತ್ತದೆ. ಪಿರಮಿಡಗ ಗಳಿಗೆ ನಮ್ಮಲ್ಲಿರುವ ಒತ್ತಡವನ್ನು ನಿವಾರಣೆಮಾಡುವ ಗುಣವಿದೆ. ಪಿರಮಿಡ್ ಕೆಳಗೆ ಕುಳಿತರೆ ಉತ್ಸಾಹ, ಆಹ್ಲಾದ ಹೆಚ್ಚುತ್ತದೆ. ಪಿರಮಿಡ್ ಆಕಾರದಲ್ಲಿ ನಿರ್ಮಿಸಿದ ಮನೆ, ಅಥವಾ ಕಟ್ಟಗಳಲ್ಲಿ, ಮನರಂಜನಾ ಕೇಂದ್ರಗಳಲ್ಲಿ ಇವುಗಳನ್ನು ನಿರ್ಮಿಸಿದರೆ ಒತ್ತಡವನ್ನು ನಿವಾರಿಸಲು ಬಹಳ ಅನುಕುಲ ಮಾಡುತ್ತದೆ. ದಿ ನಿತ್ಯದ ಕೆಲಸಗಳಿಂದ ಉಂಟಾಗುವ ಒತ್ತಡವನ್ನು ಪೂರ್ತಿಯಾಗಿ ತಡೆಯಲು ಸಾಧ್ಯವಿಲ್ಲವಾದರೂ ತಕ್ಕ ಮಟ್ಟಿಗೆ ಅದನ್ನು ನಿವಾರಿಸ ಬಹುದು.

ಚೆನ್ನೈ ನಿವಾಸಿ ಬಾಲಾಜಿಯವರೆಗೆ ತಮ್ಮ ಆಫೀಸ್ ಕೆಲಸದ ಒತ್ತಡಗಳಿಂದ ಸರಿಯಾಗಿ ಮಲಗಲ ಆಗುತ್ತಿರಲಿಲ್ಲ, ನಿದ್ದೆ ಮನುಷ್ಯನಿಗೆ ಬಹಳ ಅವಶ್ಯಕ ಪಿರಮಿಡ್ ಬಳಕೆಯಿಂದ ಈ ಗ ಅವರೆಗೆ ಪೂರ್ತಿ ಆರಾಮವಾಗಿದೆ. ಪಿರಮಿಡ್ ನಮ್ಮೊಳಕ್ಕೆ ಅಪಾರವಾದ ಶಕ್ತಿಯನ್ನು ತುಂಬುತ್ತದೆ. **Alpha-Theta** ಹಂತಗಳಿಗೆ ಮನಸ್ಸನ್ನು ತಲುಪುವಂತೆ ಮಾಡಿದಾಗ ಅತೀ ಹೆಚ್ಚು ವಿಶ್ರಾಂತಿ ಪಡೆಯುತ್ತೇವೆ.

ಭೂಮಿಯ ಮೇಲಿನ ಅಮೃತ ಪಿರಮಿಡ್ ನೀರು. ಪಿರಮಿಡ್‌ನಲ್ಲಿ ಇಟ್ಟಾಗ ಅದು ಪ್ರಕೃತಿ ಸಹಜವಾದ ಔಷಧಿಯಾಗುತ್ತದೆ. ಮನುಷ್ಯನ ದೇಹವು ಮುಕ್ಕಾಲು ಪಾಲು ಬರೀ ನೀರಿನಿಂದ ತುಂಬಿರುವ ವಿಷಯ ನಮಗೆಲ್ಲರಿಗೂ ಗೊತ್ತೇ ಇದೆ. ಹೊಸದಾಗಿ ಹುಟ್ಟಿರುವ ಶಿಶುವಿನಲ್ಲಿ 77% ನೀರಿರುತ್ತದೆ, ಮಕ್ಕಳಲ್ಲಿ 59% ಹಾಗೂ ವಯಸ್ಕರಲ್ಲಿ 45-65% ನೀರಿರುತ್ತದೆ. ಅಂದರೆ ಸುಮಾರು 69-72% ನಮ್ಮೆಲ್ಲರಲ್ಲೂ ನೀರು ತುಂಬಿದೆ.

ಪಿರಮಿಡ್ ನೀರಿನಿಂ ದ ಹಲವು ಬಗೆಯ ನೋವುಗಳನ್ನು ನಿವಾರಿಸಿಕೊಳ್ಳಬಹುದು. ಯಾವುದೇ ಕೀಟಗಳು ಕಡಿದಾಗ ಈ ನೀರಿನಿಂದ ಶೀಘ್ರ ಉಪಶಮನ ದೊರೆಯುತ್ತದೆ. ಪಿರಮಿಡ್ ನೀರನ್ನು ಮುಖಕ್ಕೆ ಹಚ್ಚಿದರೆ 5,6 ವಾರಗಳಲ್ಲಿ ಚರ್ಮವು ತಾರುಣ್ಯ ಭರಿತವಾಗುತ್ತದೆ.

ಪರಮಿಡ್ ನೀರನ್ನು ಅಡಿಗೆಗೆ ಬಳಸಿದರೆ ಊಟವು ರುಚಿಕರವಾಗಿರುತ್ತದೆ. ಅಡಿಗೆ ಸಮ ಕೂಡ ಡಿಮೆಯಾಗುತ್ತದೆ. ಹಾಗೆಯೇ ದಿನವೂ ಪಿರಮಿಡ್ ನೀರನ್ನು ಕುಡಿದರೆ ಜೀರ್ಣಶಕ್ತಿಯು ಅಭಿವೃದ್ಧಿಯಾಗುತ್ತದೆ. ಹೊಟ್ಟೆಯ ತಂದರೆಗಳು ನಿವಾರಣೆಯಾಗಿ, ವಿಸರ್ಜನೆಗೆ ಸಹಾಯ ಮಾಡುತ್ತದೆ. ಇದರಿಂದ ದೇಹದ ಆರೋಗ್ಯದಲ್ಲಿ ಸುಧಾರಣೆ ಕಂಡುಬರುತ್ತದೆ. ಪಿರಮಿಡ್ ನೀರಿನಲ್ಲಿ ಆಮ್ಲಜನಕ ಕ್ಷೀಣಿಸುವುದಿಲ್ಲ, ಅದು ಹೆಚ್ಚು ಪರಿಶುದ್ಧವಾಗಿರುತ್ತದೆ.

ನಿಮ್ಮ ಮೀನಿನ ತೊಟ್ಟಿಗಳಿಗೆ ಪಿರಮಿಡ್ ನೀರನ್ನು ಬಳಸಿದರೆ ಆ ಮೀನುಗಳಿಗೆ ಆರೋಗ್ಯ ಚೆನ್ನಾಗಿರುತ್ತದೆ.

ದೇಹದಲ್ಲಿ ಉತ್ಪತ್ತಿಯಾಗುವ ವಿಷವನ್ನು ಹೊರಗೆ ಹಾಕುವ ವ್ಯವಸ್ಥೆ ಕ್ಷೀಣಿಸಿದಾಗ ಹಾಗೂ ಹೊರಗಿನ ಹಲಾವಾರು ವಿಷಯಗಳಿಂದ ತ್ತರಿಸಿದಾಗ ಪಿರಮಿಡ ನೀರು ಬಲು ಉಪಯೋಗಕಾರಿ. ಅಜೀರ್ಣವಾದಾಗ ಇದು ರಾಮ ಬಾಣ. ಕನಿಷ್ಟ 24 ಗಂಟೆಗಳ ಕಾಲ ನೀರನ್ನು ಪಿರಮಿಡ್‌ನಲ್ಲಿಡಬೇಕು ಅದಾದ ನಂತರ ಆ ನೀರಿನಲ್ಲಿ ಅಮೃತದ ಗುಣಗಳು ಉಂಟಾಗುತ್ತದೆ.

ನೀವು ಕೂಡಾ ಪಿರಿಡ್ ಕೆಳಗೆ ಕಾಲ ಕಳೆದ ಮೇಲೆ ನಿಮ್ಮಲ್ಲಿ ಈ ಎಲ್ಲಾ ಗುಣಗಳು ಕಾಣಿಸಿಕೊಳ್ಳುತ್ತದೆ.

* ಅಧಿಕ ಶಕ್ತಿ
* ಆರೋಗ್ಯ
* ಶಾಂತಿ
* ಸಮಾಧಾನ
* ಗಮನ ಶಕ್ತಿ
* ತೇಜಸ್ಸು

ಪಿರಮಿಡ್ ಗಾತ್ರ ದೊಡ್ಡದಾದಷ್ಟು ಅದರ ಒಳ್ಳೆಯ ಪರಿಣಾಮ ಪರಿಣಾಮ ಹೆಚ್ಚು. ನಿಮ್ಮ ಶಕ್ತಿ ಸಾಮರ್ಥ್ಯಗಳನ್ನು ಹೆಚ್ಚಿಸುತ್ತದೆ. ನಿಮ್ಮ ಜೀವನ ಶೈಲಿಯು ಉನ್ನತ ಮಟ್ಟಕ್ಕೆ ಏರುತ್ತಾ ಹೋಗುತ್ತದೆ, ಪಿರಮಿಡ್‌ನಿಂದ ಒಳ್ಳೆಯದಾಗುತ್ತದೆ.

- ವಂಶಿ, ಚೆನ್ನೈ

" *ಬ್ರಹ್ಮರ್ಷಿ ಪತ್ರೀಜಿ ಜನ್ಮದಿನ ಸಮಾರಂಭಕ್ಕೆ ಎಲ್ಲರಿಗೂ ಆತ್ಮೀಯ ಆಹ್ವಾನ* "

ಕಾರ್ಯಕ್ರಮದ ವಿವರಗಳು

| | |
|---|---|
| ತಾರೀಖು: | ನವೆಂಬರ್ 10, ಮಧ್ಯಾಹ್ನದವರೆಗೆ ವರ್ನಿ, ಅನಂತರ ಬಾಸರ ಪ್ರಯಾಣ |
| | ನವೆಂಬರ್ 11, ಪಕ್ಕರ್‌ನಗರ್, ಬೋಧನ್‌ನಲ್ಲಿ ಜನ್ಮದಿನ ಸಮಾರಂಭ ....ಪತ್ರೀಜಿ ಸಂದೇಶ, ಅನಂತರ ಹೈದರಾಬಾದ್‌ಗೆ ಪ್ರಯಾಣ. |
| ಸ್ಥಳ: | '' ಸಾವಿತ್ರಿ ಪಿರಮಿಡ್ ಧ್ಯಾನಕೇಂದ್ರ '' ಪಕ್ಕರ್‌ನಗರ್, ಬೋಧನ್ |
| ವಿವರಗಳಿಗೆ: | ಧ್ಯಾನವಂತ ದತ್ತು 94412 43173 |

## ಸಿರಿಗುಪ್ಪದಲ್ಲಿ ಯಶಸ್ವಿಯಾಗಿ ನಡೆದ ಸೇತ್ ವರ್ಕ್‌ಷಾಪ್



Sep26th, 2009 ಶನಿವಾರ ಬೆಳಗ್ಗೆ 10.30ಯಿಂದ ಸಂಜೆ 7 ಗಂಟೆಯವರೆಗೆ ಹೈದರಾಬಾದ್ ಸೀನಿಯರ್ ಮಾಸ್ಟರ್ ಬಾಲಕೃಷ್ಣರವರಿಂದ ಸೇತ್ ವರ್ಕ್‌ಷಾಪ್‌ನ್ನು ಯಶಸ್ವಿಯಾಗಿ ನಡೆಸಿಕೊಟ್ಟರು. ಅಂದು 100ಜನ ಧ್ಯಾನಿಗಳು ಭಾಗವಹಿಸಿದರು. ಹೆಚ್ಚಿನ ಎನರ್ಜಿಯಿಂದ ಕೂಡಿದ ಆ ಕಾರ್ಯಕ್ರಮ ನಮಗೆಲ್ಲರಿಗೂ ಬಹಳ ಆನಂದವನ್ನು ಕೊಟ್ಟಿತು. ನಮ್ಮ ಸಿರಿಗುಪ್ಪ ಪಿರಮಿಡ್ ಧ್ಯಾನ ಕೇಂದ್ರದ ಎಲ್ಲಾ ಸದಸ್ಯರುಗಳ ಪರವಾಗಿ ಅವರಿಗೆ ವಂದನೆಗಳನ್ನು ತಿಳಿಸುತ್ತಿದೇವೆ.

–ವಿಷಯ ಸಂಗ್ರಹಣೆ: ಸ್.ಮ್.ಸುಮಂಗಳ,ಸಿರಿಗುಪ್ಪ

## 12ಗಂಟೆಗಳ ಅಖಂಡ ಧ್ಯಾನದ ನನ್ನ ಅನುಭವ



ನನ್ನ ಹೆಸರು ಸುಮಂಗಳ. ನಾನು ದಢಸೂಗೂರು-ಕಾಮಧೇನು ಪಿರಮಿಡ್ ಧ್ಯಾನಕೇಂದ್ರದಲ್ಲಿ 23-9-2009 ಬುಧವಾರದಂದು ಬೆಳಗಿನ 7 ಗಂಟೆಯಿಂದ ಸಂಜೆ 7 ಗಂಟೆಯವರೆಗೂ ಶ್ವಾಸಾಹಾರದಿಂದ್ದಿದಿನಿ. ಕುಳಿತ 2 ಗಂಟೆ ನಂತರ ನನಗೆ ಗೊತ್ತಿಲ್ಲದೆಂದೋ Book pen ಕೊಡಿ ಎಂದು ಸನ್ನ ಮಾಡಿದರೆ ಇದನ್ನು ಮನೆಯವರು ಅರ್ಥ ಮಾಡಿಕೊಂಡು ತಂದು ನನ್ನ ತೊಡೆಯ ಮೇಲಿಟ್ಟು ಹೋಗಿದ್ದಾರೆ. ನಂತರ ನನಗಾದ ಅನುಭವ. ಆ ದೃಶ್ಯ ಅಕ್ಷರ ರೂಪಗಳಲ್ಲಿ ಕಂಡು ನನ್ನನ್ನು ಬರೆಯುವಂತೆ ಪ್ರೇರೇಪಿಸುತ್ತಿದೆ. ಹಾಗೇ ನನಗೆ ಗೊತ್ತಿಲ್ಲದೆಯೇ ಬರೆದೆ. ನಂತರ ಸಂಜೆ 7 ಗಂಟೆಗೆ ನನ್ನ ಮನೆಯವರು ಬಂದು ok ಹೇಳಿದ ನಂತರ ಸುಮಾರು 10 ನಿಮಿಷಗಳ ವರೆಗೆ ಕಣ್ಣುಗಳು ತೆರಿಯಲು ಆಗಲಿಲ್ಲ, ಆದರೂ ಪದೇ ಪದೇ ok ಹೇಳಿತಣಗೆದೆ. ನಂತರ Book pen ಕೇಳಿದ್ದು ಎನೋ ಬರೆದಿರುವಿರಿ ಅಂತ ಹೇಳಿದ ನಂತರ ಸರಿ ಅದೇನು ಬರೆದಿರುದೆ ಎಂದು ಓದಿದಾಗ ಆಶ್ಚರ್ಯವಾಯಿತು. ಹೀಗೆ ನಾನೇನಾ ಬರೆದಿದ್ದು ಎಂದು ಭೀಮೇಶಣ್ಣ ನವರಿಗೆ ಹೇಳಿದಾಗ ಇದನೇ ಆಟೋರೈಟಿಂಗ್ ಎನ್ನುತ್ತಾರೆ ಎಂದರು. ಅಲ್ಲಿ ನಾನು ಬರೆದ ವಿಷಯ- ಭೌತಿಕ ದೇಹವಾದ ಈ ನಾನು ಎಲ್ಲವನ್ನು ಮರಿತು ಶ್ವಾಸಧಾರದ ಜೊತೆ ಸಣ್ಣ ತಂತಿಯ ಹಾಗೆ ಪ್ರಯಾಣಿಸುತ್ತಾ ಕೆಲವು ಕ್ಷಣಗಳವರೆಗೆ ಹಾಗೇ ಇದ್ದು ನಂತರ ಅದನ್ನು ಮರೆತು ಎಲ್ಲೊ ಪ್ರಯಾಣಿಸುತ್ತಾ ನಂತರ ನಾನೆಲ್ಲಿ ಎಂದು ನನ್ನನ್ನು ನಾನೇ ನೋಡುಕೊಂಡರೂ ನಾನು ಕಾಣಲಿಲ್ಲ, ಆದರೂ ನಾನಿದ್ದೇನೆ, ಅಂತರಂಗದ ನಾನಿದ್ದೇನೆ, ಎಷ್ಟೊಂದು ಅದ್ಭುತ. ಹಾಗಾದರೆ ಆ ಕಂಡು ಕಾಣದ ಆ ನಾನು ಯಾರು? ರೂಪವೂ ಇಲ್ಲದೆ, ಶ್ವಾಸವೂ ಇಲ್ಲದೆ ನಾನು ಯಾರು? ಯಾರು ಗೊತ್ತೆ "ಅತೀತ ಆನಂದ ಲೋಕದಲ್ಲಿ ತೇಲಾಡುತ್ತಿರುವ ಪಕ್ಷಿಯ ಹಾಗೆ. ಹಾರಾಡುತ್ತಿರುವ ಆ ನಾನೇ ಭಗವಂತ, ಆ ನಾನೇ ಬ್ರಹ್ಮಾಂಡ, ಆ ನಾನೇ ಆನಂದ.

ಹಾಗಾದರೆ "ಈ" ನಾನು ಯಾವಾಗಲೂ, ಎಲ್ಲಡೆಯೂ ಹೇಗೆ ಜೀವಿಸಬೇಕು? ಸಾಧನೆಯಿಂದ ಎಲ್ಲವೂ ಸಾಧ್ಯ. "ಈ" ನಾನು ಇಹ- ಪರಗಳೆರಡಲ್ಲಿಯೂ ಅಮಿತಾನಂದದಿಂದ ಜೀವನ ಸಾಗಿಸವಾಗ ಮಾತ್ರ ಸೃಷ್ಟಿಯೆಲ್ಲವೂ ನಗುವಂತೆ ಗೋಚರಿಸುತ್ತದೆ. ಸೃಷ್ಟಿಯೂ ಸಹ ನನ್ನನ್ನು ನೋಡಿ ತಡಿದೂಗುತ್ತಾ ಇದೆ. ಎಷ್ಟೊಂದು ವಿಸ್ಮಯ. ಅಷ್ಟೇ ಆನಂದ. ಸಾಕು ಈ ಸೆಗ್ಗಿ ಅಂಶಾತ್ಮ ಜೀವಿಗೆ ಇದಕ್ಕಿಂತ ಇನ್ನೇನು ಬೇಕು ಹೇಳಿ.

–ಯಸ್.ಯಮ್.ಸುಮಂಗಳ,ಸಿರಿಗುಪ್ಪ

## ಬಳ್ಳಾರಿಯಲ್ಲಿ ಯಶಸ್ವಿಯಾಗಿ ನಡೆದ ಮೂರು ದಿವಸ ಉಚಿತ ಧ್ಯಾನ ಶಿಕ್ಷಣ

ಸೆಪ್ಟೆಂಬರ್ 11-13 ವರೆಗು ಬಳ್ಳಾರಿಯಲ್ಲಿ ಉಚಿತ ಧ್ಯಾನ ಶಿಕ್ಷಣವನ್ನು ಪತಂಜಲಿ ಪಿರಮಿಡ್ ಧ್ಯಾನ ಕೇಂದ್ರ ನಿರ್ವಾಹಕರು ಪಿ.ಸೂರ್ಯ ನಾರಾಯಣರವರು ಏರ್ಪಾಟುಮಾಡಿದರು. ಸೀನಿಯರ್ ಪಿರಮಿಡ್ ಮಾಸ್ಟರ್ ಆದ ತಟವರ್ತಿ ವೀರರಾಘವರಾವು ನವರು ಮೂರು ದಿವಸ ಬೆಳಗ್ಗೆ 6ಗಂಟೆ ಯಿಂದ ರಾತ್ರಿ 9ಗಂಟೆ ವರೆಗು ಧ್ಯಾನ ಶಿಕ್ಷಣವನ್ನು ನೀಡಿದರು. ಸುಮಾರು 500 ಜನ ಸೇರಿದರು. ಈ ಕಾರ್ಯಕ್ರಮಕ್ಕೆ ಭಾಗವಹಿಸಿದ ಎಲ್ಲರಿಗೂ ಉಟ- ವಸತಿ ಏರ್ಪಾಟು ಮಾಡಲಾಗಿತ್ತು.

## ಪುಸ್ತಕ ಪರಿಚಯ

### ''ದಿ ಬುಕ್ ಆಫ್ ಮಿರ್‌ದಾದ್''

ಮೈಖೆಯಿಲ್ ನೈಮೀ

ಪ್ರಕಾಶನ: ಲೈಟ್ ಹೌಸ್-ಹೆವನ್-ಅರ್ಕಾನಾ




''ಜಗಳಗಳನ್ನು ತಪ್ಪಿಸಿರಿ. ಸತ್ಯವು ಸ್ವಯಂಸಿದ್ಧವಾದುದು; ಅದಕ್ಕೆ ಯಾವುದೇ ಪುರಾವೆಯು ಬೇಕಿಲ್ಲ. ವಾದ ಮತ್ತು ಪುರಾವೆಗಳನ್ನು ಕೊಟ್ಟು ನಿಲ್ಲಿಸಿದ ಯಾವುದೇ ಆದರೂ ಸಹ, ತಕ್ಷಣದಲ್ಲಿಯೇ ಆಗಲಿ ಅಥವಾ ಮುಂದೆ ಎಂದಾದರು ಒಂದು ದಿನ, ವಾದ ಮತ್ತು ಪುರಾವೆಗಳಿಂದಲೇ ಕುಸಿದುಬೀಳುತ್ತದೆ.''

''ಯಾವುದಾದರೊಂದನ್ನು ರುಜುವಾತುಪಡಿಸಬೇಕು ಎಂದಾದರೆ, ಆ ಒಂದರ ವಿರುದ್ಧವಾದುದನ್ನು ನಿರಾಕರಿಸಬೇಕು. ಅದರ ವಿರುದ್ಧವಾದುದನ್ನು ರುಜುವಾತುಪಡಿಸುವುದು ಎಂದರೆ ಅದರ ನಿರಾಕರಣೆ ಎಂದು ಅರ್ಥ. ದೇವರು ವೈರುದ್ಧ್ಯಗಳನ್ನು ಸೃಷ್ಟಿಸಿಲ್ಲ. ದೇವರ ಅಸ್ತಿತ್ವವನ್ನು ನೀವು ಹೇಗೆ ನಿರಾಕರಿಸುತ್ತೀರಿ ಅಥವಾ ಅಂಗೀಕರಿಸುತ್ತೀರಿ?''

''ಸತ್ಯದ ವಾಹಕನಾಗಬೇಕಾದರೆ, ನಿಮ್ಮ ನಾಲಿಗೆಯು ಎಂದಿಗೂ ಬಡಿಗೋಲಾಗಿರಬಾರದು; ವಿಷಯುಕ್ತವಾಗಿರಬಾರದು; ಗಾಳಿ ಸೂಚಿಯಂತೆ ಅತ್ತಿಂದಿತ್ತ, ಇತ್ತಿಂದತ್ತ ಓಲಾಡಬಾರದು; ಮತ್ತು, ನಾಲಿಗೆಯು ಅಲೆಮಾರಿಯಾಗಿರಬಾರದು ಅಥವಾ ಜಲಗಾರನಂತೆ ಇರಬಾರದು.''

''ದನಿರಹಿತರ ನೆಮ್ಮದಿಗಾಗಿ ಅವರ ಪರವಾಗಿ ದನಿಎತ್ತಿ. ನಿಮಗೇ ನೆಮ್ಮದಿ ಬೇಕಾಗಿದ್ದರೆ, ಮಾತನಾಡದೆ ಮೌನವಾಗಿರಿ.''

''ಪದಗಳು - ವಿಸ್ತಾರ ಪ್ರದೇಶ ಎಂಬ ಸಮುದ್ರದ ಮೇಲೆ ಚಲಿಸುತ್ತಾ, ಹಲವಾರು ಬಂದರುಗಳನ್ನು ಮುಟ್ಟುತ್ತಾ ಸಾಗುವ ಹಡಗಿನಂತೆ. ಅಂತಹ ಹಡಗಿನಲ್ಲಿ ಏನನ್ನು ತುಂಬಿಸುತ್ತಿದ್ದೀರಿ ಎಂಬುದರ ಬಗ್ಗೆ ಎಚ್ಚರಿಕೆ ಇರಲಿ. ಅವು ತಮ್ಮ ದಾರಿಯಲ್ಲಿ ಸಾಗುತ್ತಾ ಪ್ರಯಾಣಿಸಿ, ಕೊನೆಗೆ, ನಿಮ್ಮ ಬಾಗಿಲಿಗೇ ಆ ಸರಕುಗಳನ್ನು ತಂದು ಸುರಿಯುತ್ತವೆ''

### ''ಪಾಸ್ಟ್ ಲೈವ್ಸ್ - ಫ್ಯೂಚರ್ ಲೈವ್ಸ್''

ಡಾ. ಬ್ರೂಸ್ ಗೋಲ್ಡ್‌ಬರ್ಗ್

ಪ್ರಕಾಶನ: ಬ್ಯಾಲನ್‌ಟೈನ್ ಬುಕ್ಸ್




'' ಈ ಪುಸ್ತಕದಾದ್ಯಂತ, ದೇವರ ಕುರಿತಾಗಿ ನಾನು ಮಾಡಿರುವ ಹಲವಾರು ಉಲ್ಲೇಖಗಳನ್ನು ಪ್ರಾಯಶಃ ನೀವು ಗಮನಿಸಿರಬಹುದು. ಹಿಪ್‌ನೋ-ಥೆರಪಿಸ್ಟ್ ಆಗಿ ನಾನು ಮಾಡಿರುವ ಕೆಲಸಗಳು, ಅಂದರೆ, ಗತಜನ್ಮಕ್ಕೆ ಮರಳುವ ಮತ್ತು ಮುಂದಿನ ಜನ್ಮಕ್ಕೆ ತೆರಳುವಲ್ಲಿ ನಾನು ಗಳಿಸಿರುವ ಪರಿಣತಿಯು, ದೇವರಲ್ಲಿನ ನನ್ನ ನಂಬಿಕೆಯನ್ನು ದೃಢಗೊಳಿಸಿದೆ. ದೇವರಲ್ಲಿ ತುಂಬಾ ಬಲವಾದ ನಂಬಿಕೆಯನ್ನು ಇಡದೆಯೇ, ಈ ಕಾರ್ಯಕ್ಷೇತ್ರದಲ್ಲಿ, ಯಾರಾದರೊಬ್ಬರೂ, ಕಾರ್ಯನಿರ್ವಹಿಸಬಲ್ಲರು ಎಂಬುದನ್ನು ಕಲ್ಪಿಸಿಕೊಳ್ಳಲೂ ಸಹ ನನಗೆ ಕಷ್ಟವಾಗುತ್ತದೆ. ಪರಮಾನಸಶಾಸ್ತ್ರವನ್ನು (ಪ್ಯಾರಾಸೈಕಾಲಜಿ), ಅದರಲ್ಲಿಯೂ ವಿಶೇಷವಾಗಿ, 'ಕರ್ಮ ಚಕ್ರ' ಕುರಿತು ಹೆಚ್ಚು ಹೆಚ್ಚು ಜನರು ಅಧ್ಯಯನ ಮಾಡಿದರೆ, 'ಇರುವುದು ಒಬ್ಬ ದೇವರು' ಎಂಬ ವಾಸ್ತವ ವಾದದ ಮರುಹುಟ್ಟನ್ನು ನಾವು ಕಾಣುತ್ತೇವೆ ಎಂಬುದರಲ್ಲಿ ನನಗೆ ಬಲವಾದ ವಿಶ್ವಾಸವಿದೆ.''

- ಕನ್ನಡಕ್ಕೆ : ಎ.ಸತ್ಯನಾರಾಯಣ

# ಧ್ಯಾನಾನುಭವಗಳು



ನಿರ್ಮಲ ಪಾಟಿಲ್
ರಾಯಚೂರು

ನನ್ನ ಹೆಸರು ನಿರ್ಮಲ ಪಾಟಿಲ್. ನಮ್ಮ ಊರು ರಾಯಚೂರು. ಕಳೆದ ಮೂರು ವರ್ಷಗಳಿಂದ ಧ್ಯಾನ ಮಾಡುತ್ತಾ ಇದ್ದೇನೆ. ನನ್ನ ಧ್ಯಾನದ ಅನುಭವಗಳು 2008 ಬುದ್ಧ ಪೂರ್ಣಿಮ ದಿನ ನಾನು ನಮ್ಮ ಮನೆಯಲ್ಲಿ ಧ್ಯಾನ ಮಾಡುವಾಗ, ಬ್ರಹ್ಮರ್ಷಿ ಪತ್ರೀಜಿಯವರು ನನಗೆ ಧ್ಯಾನದಲ್ಲಿ ಕಂಡು, ನನ್ನ ಹೆಸರು ಕೇಳಿದರು ಮತ್ತೆ ನಿನ್ನ ಅನುಭವ ಹೇಳು ಅಂದಾಗ, ನಾನು ಧ್ಯಾನ ಮಾಡುತ್ತಾ ಇರುವುದರಿಂದ, ಆನಂದವಾಗಿ ಇದ್ದೀನಿ ಅಂತ ಹೇಳಿದೆ. 2009 ಗುರು ಪೂರ್ಣಿಮ ದಿನ ರಾಯಚೂರಿನಲ್ಲಿರುವ ಸಾಯಿ ಮಂದಿರದಲ್ಲಿ ಸಾಮೂಹಿಕ ಧ್ಯಾನ ಮಾಡುವಾಗ ನಾನು ಪ್ರಕೃತಿಯನ್ನು ತುಂಬಾ ಚೆನ್ನಾಗಿ ನೋಡಿದ್ದೆ. ಮತ್ತೆ ಸೆಪ್ಟಂಬರ್ 6ರಂದು ರಾಯಚೂರಿನಲ್ಲಿರುವ ಏಗನೂರು ದೇವಸ್ಥಾನದಲ್ಲಿ ಇರುವ ಪಿರಮಿಡ್ ನಲ್ಲಿ ಸಾಮೂಹಿಕ ಧ್ಯಾನ ಮಾಡಿದಾಗ ಸೂಕ್ಷ್ಮಶರೀರಯಾನದಿಂದ ನಾನು ಈಜಿಪ್ಟ್ ನಲ್ಲಿರುವ ಗೀಜಾ ಪಿರಮಿಡ್ ನ್ನು ನೋಡಿದ್ದೇನೆ.



ಭೀಮಣ್ಣ ಜೇಡರ್
ದಾವಣಗೆರೆ

ನನ್ನ ಹೆಸರು ಭೀಮಣ್ಣ ಜೇಡರ್ ನಾನು ದಾವಣಗೆರೆ ಜಿಲ್ಲೆಯಲ್ಲಿ ವಾಸವಾಗಿದ್ದೇನೆ. ನನಗೆ ಈ ಪಿರಮಿಡ್ ಧ್ಯಾನವು 2 ವರ್ಷಗಳ ಹಿಂದೆ ನನ್ನ ಮೊಮ್ಮಗ ಹರೀಶ್ ನ ಮುಖಾಂತರ ತಿಳಿಯಿತು. ಮೊದಲು ನನ್ನ ಜೀವನದಲ್ಲಿ ಹಲವಾರು ಕಾರಣಗಳಿಂದ ಜೀವನವೆಂಬುದು ಗೊಂದಲಮಯವಾಗಿದ್ದಿತು. ಆಗ ನನ್ನ ಆರೋಗ್ಯವೂ ಸಹ ತುಂಬಾ ವ್ಯತಿರಿಕ್ತವಾಗಿದ್ದಿತು. ನನಗೆ ಎದೆ ನೋವು, ಕೆಮ್ಮು ಮತ್ತು ತಲೆ ನೋವು(ಪಿತ್ತ) ಪದೇ ಪದೇ ಬರುತ್ತಿತ್ತು. ಎಲ್ಲಾ ನುರಿತ ವೈದ್ಯರಿಗೆ ತೋರಿಸಿದರೂ ಕಡಿಮೆಯಾಗಲಿಲ್ಲ. ಆಗ ನನಗೆ ಧ್ಯಾನವು ತುಂಬಾ ಸಹಕಾರಿಯಾಯಿತು. ಒಮ್ಮೆ ನಾನು ಎದೆನೋವಿನಿಂದ ಬಳಲುತ್ತಿದ್ದಾಗ ವೈದ್ಯರ ಬದಲಾಗಿ ಧ್ಯಾನದ ಮೊರೆ ಹೋದೆ, ಆಗ ನನ್ನ ಮೊಮ್ಮಗನು ಎದೆಯ ಮೇಲೆ ಪಿರಮಿಡ್ ಕ್ಯಾಪನ್ನು ಇಟ್ಟುಕೊಂಡು ಧ್ಯಾನವನ್ನು ಮಾಡುವಂತೆ ಹೇಳಿದನು. ಅದೇ ರೀತಿ ನಾನು ನನ್ನ ಮೇಲೆ ಮತ್ತು ಪಿರಮಿಡ್ ನ ಮೇಲೆ ನಂಬಿಕೆ ಇಟ್ಟು ಸುಮಾರು 2 ಗಂಟೆಗಳ ಕಾಲ ಧ್ಯಾನ ಮಾಡಿದೆ. ಅದರಿಂದ ನನಗೆ ಎದೆನೋವು ಸುಲಭರೀತಿಯಲ್ಲಿ ಗುಣವಾಗಿದ್ದು, ಇದುವರೆವಿಗೂ ನನ್ನ ಹತ್ತಿರ ಸುಳಿಯಲೇ ಇಲ್ಲ. ಧ್ಯಾನದಿಂದ ನನ್ನ ಜೀವನವು ತುಂಬಾ ಆನಂದಮಯವೂ ಶಾಂತವೂ ಆಗಿದ್ದು, ಆ ಪರಮಾತ್ಮನು ಕರುಣಿಸಿರುವ ಸುಂದರವಾದ ಜೀವನವನ್ನು ಈ ಭೂಮಿಯ ಮೇಲೆ ಮನಸಾ ಪೂರ್ವಕವಾಗಿ ಜೀವಿಸುತ್ತಿದ್ದೇನೆ. ಹೀಗೆ ನನ್ನ ಅನುಭವಕ್ಕೆ ಬಂದ ಕೆಲವು ಧ್ಯಾನದ ಅನುಭವಗಳನ್ನು ನನ್ನ ಬಂಧು ಮಿತ್ರರಲ್ಲಿ ಹಂಚಿಕೊಂಡಾಗ ಅವರೂ ಇದರ ಮಹತ್ವವನ್ನು ತಿಳಿದು ಧ್ಯಾನಿಗಳಾಗಿ ಆನಂದಮಯ ಜೀವನ ನಡೆಸುತ್ತಿದ್ದಾರೆ. ನಾನು ಇತ್ತೀಚಿನ ದಿನಗಳಲ್ಲಿ ಧ್ಯಾನವನ್ನು ದಿನಂಪ್ರತಿ ತಪ್ಪದೇ ಮಾಡುತ್ತಿದ್ದೇನೆ, ಧ್ಯಾನವೆಂದರೆ ಜಪ-ತಪ ಮಾಡುವದಲ್ಲ, ಯಾವುದೇ ರೀತಿಯ ದೇವರ ಆಕಾರವನ್ನು ಆಗಲಿ, ಯಾವ ಆಶಾ ಚಿತ್ರವನ್ನಾಗಲಿ ಕಲ್ಪಿಸಿಕೊಳ್ಳದೇ, ಶಾಂತಚಿತ್ತವಾಗಿ ಸುಖಸ್ಥಿರ ಆಸನದಲ್ಲಿ ಕುಳಿತು ಕೇವಲ ಶ್ವಾಸದ ಮೇಲೆ ಗಮನವನ್ನು ಹರಿಸಿದರೆ ಸಾಕು. ಆ ವಿಶ್ವಮಯ ಪ್ರಾಣಶಕ್ತಿಯು ನಮ್ಮ ಶರೀರದಲ್ಲಿ ಸಂಚರಿಸಿ ಜೀವನಾಡಿಗಳನ್ನು ಚೈತನ್ಯಮಯವಾಗಿಸುತ್ತದೆ. ಇದು ಸರಿಯಾದ ಧ್ಯಾನ. ಈ ಅದ್ಭುತವಾದ ಜ್ಞಾನವನ್ನು ತಿಳಿಸಿಕೊಟ್ಟಿರುವ ಬುದ್ಧ ಭಗವಾನನಿಗೂ ಮತ್ತು ನವಯುಗದ ಚೇತನವಾಗಿರುವ ಶ್ರೀ ಬ್ರಹ್ಮರ್ಷಿ ಪತ್ರೀಜಿಯವರಿಗೂ ನಾನು ಅನಂತ ಪ್ರಣಾಮಗಳನ್ನು ಸಲ್ಲಿಸುತ್ತೇನೆ. ಈ ಧ್ಯಾನವೆಂಬುದು ಪುರಾತನಕಾಲದ ಋಷಿಮುನಿಗಳಿಂದ ತಿಳಿದ ವಿಷಯವಾದರೂ, ಇತ್ತೀಚಿನ ದಿನಗಳಲ್ಲಿ ಧ್ಯಾನವು ಕೆಲವರಿಗೆ ಮಾತ್ರ ತಿಳಿದ ವಿಷಯವಾಗಿದೆ. ಆದರೂ, ಧ್ಯಾನ ಪ್ರಚಾರವು ಎಲ್ಲೆಡೆ ಹಬ್ಬುತ್ತಿರುವುದು ಸಂತೋಷಕರ ವಿಷಯವಾಗಿದೆ.

ಧ್ಯಾನವೆಂದರೆ ದುಃಖನಿವಾರಣೆ, ರೋಗನಿವಾರಣೆ ಹಾಗೂ ಜ್ಞಾನ ಪ್ರಸಾದಿನಿ. ಧ್ಯಾನದಿಂದ ಹೈ ಬಿ.ಪಿ, ಲೋ ಬಿ.ಪಿ, ಶ್ವಾಸೋಚ್ಛ್ವಾಸ ತೊಂದರೆಗಳೆಲ್ಲವೂ ಸರಳ ರೀತಿಯಲ್ಲಿ ನಿವಾರಣೆಯಾಗಿ ಆರೋಗ್ಯವಂತರಾಗಿ ಬಹಳಷ್ಟು ದಿನಗಳ ಕಾಲ ಸುಖಕರವಾಗಿ ಬಾಳುತ್ತೇವೆ. ಇನ್ನೊಬ್ಬರ ಒತ್ತಾಯದಿಂದ ಮಾಡದೇ ನಮ್ಮ ಮನಸಾ ಧ್ಯಾನಮಾಡಿದರೆ, ಸಫಲತೆಯನ್ನು ಕಾಣಲು ಸಾಧ್ಯ. ನಾನು ಧ್ಯಾನದಿಂದ ಆರೋಗ್ಯವಾಗಿದ್ದೇನೆ. ಇದೇ ರೀತಿ ಎಲ್ಲರೂ ಧ್ಯಾನಮಾಡಿ ತಮ್ಮ ಜೀವನವನ್ನು ಅರ್ಥಪೂರ್ಣವಾಗಿ ಹಾಗೂ ಆನಂದಮಯವಾಗಿಸಿಕೊಂಡು ಜೀವಿಸಲಿ ಎಂದು ಹಾರೈಸುತ್ತಿದ್ದೇನೆ.

# ಸರ್ವಜ್ಞ



ಸರ್ವಜ್ಞ ಎಂದರೆ, ಸಂಸ್ಕೃತದಲ್ಲಿ ಎಲ್ಲವನ್ನೂ ತಿಳಿದವ ಎಂದು ಅರ್ಥ. ಸರ್ವಜ್ಞ ಕನ್ನಡದ ವಚನ ಸಾಹಿತ್ಯದ ಪ್ರಮುಖ ಕವಿಗಳಲ್ಲಿ ಒಬ್ಬ ಪ್ರಮುಖವಾಗಿ ತ್ರಿಪದಿಗಳೆಂಬ ಮೂರು ಸಾಲಿನ ವಚನಗಳನ್ನು ರಚಿಸಿರುವ ಈತನ ಕಾಲ ಮತ್ತು ಜೀವನಗಳ ಬಗ್ಗೆ ನಿಖರವಾಗಿ ಹೆಚ್ಚು ತಿಳಿದಿಲ್ಲ. ಇತರ ಲೇಖಕರು ಅವನ ಬಗ್ಗೆ ಮಾಡಿರುವ ಪ್ರಸ್ತಾಪಗಳಿಂದ ಮತ್ತು ಸರ್ವಜ್ಞನ ಭಾಷಾ ಪ್ರಯೋಗದ ಲಕ್ಷಣಗಳ ಅಧ್ಯಯನದಿಂದ ಈತನು ಜೀವಿಸಿದ್ದ ಕಾಲ ಸುಮಾರಾಗಿ 17ನೇ ಶತಮಾನದ ಆದಿಭಾಗ ಎಂದು ಪ್ರತಿಪಾದಿಸಲಾಗಿದೆ. ಪ್ರಾಯಶಃ ಪುಷ್ಪದತ್ತ ಈತನ ನಿಜನಾಮವಾಗಿದ್ದು, ಸರ್ವಜ್ಞ ಎಂಬುದು ಈತನ ಕಾವ್ಯನಾಮ.

## ಜನನ ಮತ್ತು ಬಾಲ್ಯ

ಅವನ ಹೆತ್ತಮ್ಮ ಕುಂಬಾರ ಮಾಳೆ, ಪ್ರೀತಿಯಿಂದ ನಾಮಕರಣ ಮಾಡಿದ ಹೆಸರು - ಪುಷ್ಪದತ್ತ. ಸಾಕುತಾಯಿ ಮಲ್ಲಕ್ಕ. ತಂದೆ ಬಸವರಸ. ಧಾರವಾಡ ಜಿಲ್ಲೆಯ ಮಾಸೂರಿನಲ್ಲಿ ವಾಸವಾಗಿದ್ದ ಆರಾಧ್ಯ ಬ್ರಾಹ್ಮಣ, ಬಸವರಸ, ಬಹಳ ದಿನಗಳಾದರೂ ಮಕ್ಕಳಾಗದಿದ್ದಾಗ ಮಲ್ಲಮ್ಮನನ್ನು ಸಮಾಧಾನ ಮಾಡಿ, ಪುತ್ರಸಂತಾನದ ವರ ಪಡೆಯಲು ಕಾಶೀ ಕ್ಷೇತ್ರಕ್ಕೆ ಹೊರಡುತ್ತಾನೆ. ಭಕ್ತಿಯಿಂದ ಸೇವೆ ಮಾಡಿದ ಬಸವರಸನಿಗೆ ಕಾಶಿ ವಿಶ್ವನಾಥನು ಕನಸಿನಲ್ಲಿ ಪ್ರತ್ಯಕ್ಷನಾಗಿ, 'ನಿನಗೆ ಪುತ್ರ ಪ್ರಾಪ್ತಿಯಾಗುವುದು. ಹುಟ್ಟುವ ಮಗನು ನನ್ನ ಪ್ರಸಾದದಿಂದ ಮಹಾಜ್ಞಾನಿಯಾಗುವನು' ಎಂದು ಹೇಳಲು, ಆನಂದಭರಿತನಾದ ಬಸವರಸನು, ಪ್ರಾತಃಕಾಲದಲ್ಲಿ ಎದ್ದು, ಪವಿತ್ರ ಗಂಗಾಸ್ನಾನ ಮಾಡಿ, ವಿಶ್ವನಾಥನನ್ನು ಅರ್ಚಿಸಿ, ಪ್ರಸಾದಗಳೊಂದಿಗೆ ತನ್ನ ಗ್ರಾಮದ ಹಾದಿ ಹಿಡಿದನು. ಹಗಲಿರುಳು ಪ್ರಯಾಣ ಮಾಡಿ ಅನೇಕ ಗ್ರಾಮಗಳಲ್ಲಿ ವಿಶ್ರಮಿಸಿ, ದಾರಿಯಲ್ಲಿ ಸಿಕ್ಕ 'ಅಂಬಲೂರ' ಎಂಬ ಗ್ರಾಮಕ್ಕೆ ಬರುವಾಗ ಭಯಂಕರ ಗುಡುಗು, ಸಿಡಿಲುಗಳಿಂದ ಮಳೆ ಸುರಿಯುತ್ತಿತ್ತು. ಸಮೀಪದಲ್ಲಿದ್ದ ಕುಂಬಾರಸಾಲೆಯಲ್ಲಿ ಕುಂಬಾರ ಮಾಳೆ ಎಂಬುವಳ ಮನೆಯಲ್ಲಿ ವಸತಿ ಮಾಡಿದನು. ಕಾಲಧರ್ಮ ಸಂಯೋಗದಿಂದ ಮಾಳಿಯಲ್ಲಿ ವ್ಯಾಮೋಹಗೊಂಡ ಬಸವರಸನಿಗೆ ಕಾಮ ವಿಕಾರವಾಯಿತು. ಕಾಶಿಯಿಂದ ತಂದ ತೀರ್ಥ ಪ್ರಸಾದಗಳನ್ನು ಕೊಟ್ಟು ಅವಳ ಸಂಗ ಮಾಡಿದನು. 9 ತಿಂಗಳ ನಂತರ ಮಾಳಿ ದಿವ್ಯ ತೇಜಸ್ಸಿನ ಗಂಡು ಕೂಸಿಗೆ ಜನ್ಮವಿತ್ತಳು. 'ಪುಷ್ಪದತ್ತ'ನೆಂದು ನಾಮಕರಣವೂ ಆಯಿತು. ಮುಂದೆ ಈ ಮಗುವೇ ಜಗತ್ತಿಗೆ ಸರ್ವಜ್ಞ ನೆಂದು ಪ್ರಸಿದ್ಧಿಯಾಯಿತು. ಶಿವನ ವರಪ್ರಸಾದದಿಂದ ಬಾಲ್ಯದಲ್ಲಿಯೇ ಅಗಾಧವಾದ ಪಾಂಡಿತ್ಯವನ್ನು ಪಡೆದಿದ್ದನು. ತಂದೆ ತಾಯಿಗಳಿಂದ ಅಗಲಿ ಪುಣ್ಯಕ್ಷೇತ್ರಗಳನ್ನೂ ಗುರುಮಠಗಳನ್ನೂ ಭೇಟಿಮಾಡಿ ಜ್ಞಾನಾರ್ಜನೆ ಮಾಡಿದನು. ಎಲ್ಲಾ ಶಾಸ್ತ್ರಗಳ ಜ್ಞಾನವನ್ನು ಸಂಪಾದಿಸಿದನು. ಅವನ ಜನಪ್ರಿಯ ವಚನಗಳು ಅವನ ಬಗ್ಗೆ ಸಾಕಷ್ಟು ಮಾಹಿತಿಗಳನ್ನು ಒದಗಿಸಿವೆ. ಅವನು ರಚಿಸಿದ ಕವನಗಳಿಗೆ ಲೆಕ್ಕವಿಲ್ಲ, ಅವನು ಆಶುಕವಿಯಾದ್ದರಿಂದ, ಎಷ್ಟೋ ಕವನಗಳು ಅವನ ಸ್ಮೃತಿಯಲ್ಲೇ ಉಳಿದಿರಬಹುದು.

## ತ್ರಿಪದಿಗಳು

ಒಟ್ಟು ಸುಮಾರು 1,000 ತ್ರಿಪದಿಗಳು ಸರ್ವಜ್ಞನ ಹೆಸರಿನಲ್ಲಿ ದಾಖಲಾಗಿವೆ. ಚರಿತ್ರಕಾರರ ಪ್ರಕಾರ ಇವುಗಳಲ್ಲಿ ಕೆಲವು ತ್ರಿಪದಿಗಳು ನಂತರದ ಕಾಲದಲ್ಲಿ ಬೇರಬೇರೆ ಲೇಖಕರಿಂದ ಬರೆಯಲ್ಪಟ್ಟಿರಬಹುದು. ಸರ್ವಜ್ಞನ ತ್ರಿಪದಿಗಳು ತಮ್ಮ ಸರಳತೆ ಮತ್ತು ಪ್ರಾಸಬದ್ಧತೆಯಿಂದ ಜನಪ್ರಿಯವಾಗಿವೆ. ಈ ತ್ರಿಪದಿಗಳು ಮುಖ್ಯವಾಗಿ ನೈತಿಕ, ಸಾಮಾಜಿಕ ಮತ್ತು ಧಾರ್ಮಿಕ ವಿಷಯಗಳನ್ನು ಕುರಿತವು. ಹಲವು ಒಗಟುಗಳು ಸಹ ಸರ್ವಜ್ಞನ ತ್ರಿಪದಿಗಳಲ್ಲಿ ಸೇರಿವೆ.

ಸಾಹಿತಿ ಎಲ್.ಎನ್ ಮುಕುಂದ ರಾಜ್ ರವರು ಸರ್ವಜ್ಞನ ಕುರಿತು ಹೀಗೆ ಹೇಳುತ್ತಾರೆ: ಸರ್ವಜ್ಞ ಕನ್ನಡ ಸುಸಂಸ್ಕೃತ ಮನಸ್ಸಿಗೆ ಅದ್ಭುತ ಹೊಳಹಾಗಿ ಹುಟ್ಟಿಬಂದ ಮಹತ್ವದ ಕವಿ. ಆತ ಸಂತನಾಗಿ ಬದುಕನ್ನು ಕಟ್ಟಿಕೊಂಡವನು. ತನ್ನ ಅನುಭವಕ್ಕೆ ಬಂದ ಸತ್ಯಗಳನ್ನು ಅತ್ಯಂತ ಸರಳವಾಗಿ ನಿರೂಪಿಸಿದವನು. ಲೋಕ ವ್ಯಾಪಾರಕ್ಕೆ ತನ್ನದೇ ಆದ ವಿಭಿನ್ನ ಆಲೋಚನೆಗಳನ್ನು ಕ್ರಿಯಾತ್ಮಕವಾಗಿ ಪುಟಗೊಳಿಸಿದ ಮಹಾನ್ ಚಿಂತಕ. ಅವನು ಗ್ರಹಿಸಿದ ಸತ್ಯಗಳು ಪಾರಂಪರಿಕ ಸತ್ಯಗಳಲ್ಲ, ತನ್ನ ಕಾಲದ ಜೀವನ ಕಾಣ್ಕೆಯನ್ನೂ, ಭವಿಷ್ಯದ ಮುಂಗಾಣ್ಕೆಯನ್ನು ಒಟ್ಟಿಗೆ ಕನಸಿನಂತೆ ಕಂಡ ಮನುಷ್ಯ. ಸಾಮಾನ್ಯ ಜನರ ಬದುಕಿಗೆ ಚಿಂತನಶೀಲ ನೆಲೆಯನ್ನು ಒದಗಿಸಿದವನು. ಸರ್ವಜ್ಞ ವಚನಗಳನ್ನು ಮೇಲ್ನೋಟಕ್ಕೆ ಓದಿಕೊಂಡರೆ, ಆತ ಸಮಾಜದ ಕಟು ವಿಮರ್ಶಕನಂತೆ ಕಾಣುತ್ತಾನೆ. ಆದರೆ, ಅವನ ಅಂತರ್ಯದ ನಿಲುವು ಕಟು ಟೀಕೆಯ ಪರಿಧಿಯಿಂದಾಚೆ ನಿಲ್ಲುತ್ತವೆ. ಸತ್ಯವನ್ನು ಹೇಳುವಾಗಲೂ ಗಟ್ಟಿಗಂಟಲಿನಲ್ಲಿ ಹೇಳಬೇಕಾದ ಅನಿವಾರ್ಯತೆಯಿಲ್ಲ, ಅದನ್ನು ಆತ್ಮಾನುಸಂಧಾನದ ಸೂಕ್ಷ್ಮಾತಿಸೂಕ್ಷ್ಮ ನೆಲೆಯಲ್ಲಿ ಸಮುದಾಯಕ್ಕೆ ಕವಿ

ನಿರೂಪಿಸಿದ್ದಾನೆ. ಅಂತಿಮವಾಗಿ ಸರ್ವಜ್ಞ ಆಂತರಿಕ ಅರಿವಿನ ಪರ ನಿಂತ ಸಂತ. ಆವನಿಗೆ ಬಾಹ್ಯದ ಆಚರಣೆಗಳು ಅನಾದರಣೆಗಳು ಮುಖ್ಯವಾಗುವುದಿಲ್ಲ ಒಳಗಿನ ಒಲುಮೆ ಮುಖ್ಯ.

ಕೆಳವರ್ಗದ ಜನರ ಹಿತಕ್ಕೆ ಸರ್ವಜ್ಞಪೂರಕ ಮಾತುಗಳನ್ನಾಡಿದ್ದಾನೆ. ಅವರ ಮೌಢ್ಯಕ್ಕೆ ದೈನ್ಯತೆಗೆ, ಅಸಹನೀಯ ಬದುಕಿಗೆ, ಅವಿದ್ಯೆಗೆ ಪರಿಹಾರಗಳನ್ನು ಚಾಟೋಕ್ತಿಯ ರೂಪದಲ್ಲಿ ಹುಡುಕಿದ್ದಾನೆ. ಸಿಟ್ಟು ಬಂದವನಂತೆ ಚಾಟಿ ಬೀಸಿ ಹಂಗಿಸಿದ್ದಾನೆ. ಮೇಲ್ವರ್ಗದ ನೀಚತನಗಳನ್ನು ಅತ್ಯಂತ ಸ್ಪಷ್ಟವಾಗಿ ಬಯಲಿಗೆಳೆದಿದ್ದಾನೆ. ಕನ್ನಡದ ಈ ಸರ್ವೋತ್ತಮ ಕವಿಯನ್ನು ಮೇಲ್ವರ್ಗದ ಜನ ಇಲ್ಲಿಯವರೆಗೆ ಉಳಿಸಿ, ಬಾಳಿಸಿಕೊಂಡಿರುವ ಬಗ್ಗೆ ಯಾರಿಗಾದರೂ ಆಶ್ಚರ್ಯವೆನಿಸುತ್ತದೆ. ಸರ್ವಜ್ಞನ ಈ ಎಚ್ಚರಿಕೆಗಳನ್ನು ನಮ್ಮ ಜನ ಮನಗಾಣಬೇಕು. ಅವನ ಸಿದ್ಧಾಂತಗಳನ್ನು ಜೀವನಕ್ಕೆ ಹತ್ತಿರ ಮಾಡಿಕೊಳ್ಳಬೇಕು. ಸರ್ವಜ್ಞನ ತ್ರಿಪದಿಗಳಲ್ಲಿ ಕೆಲವನ್ನು ಈಗ ಗಮನಿಸೋಣ.

**ಸರ್ವಜ್ಞನೆಂಬುವನು ಗರ್ವದಿಂದಾದವನೆ?**
**ಸರ್ವರೊಳು ಒಂದೊಂದು ನುಡಿಗಲಿತು**
**ವಿದ್ಯೆಯಾ ಪರ್ವತವೆ ಆದ ಸರ್ವಜ್ಞ.**

ಸರ್ವಜ್ಞ ಎಂದರೆ ಎಲ್ಲವನ್ನೂ ಬಲ್ಲವ ಎಂಬ ಅರ್ಥ. ಅಂತಹ ಸರ್ವಜ್ಞನು ಅಹಂಕಾರದಿಂದ ಆ ಮಟ್ಟಕ್ಕೆ ಬಂದಿಲ್ಲ, ಎಲ್ಲರಿಂದಲೂ ಜ್ಞಾನದ ಮಾತುಗಳನ್ನು ತಿಳಿದು ವಿದ್ಯೆಯನ್ನು ಒಟ್ಟುಗೂಡಿಸಿಕೊಂಡವನು ತಾನು, ಎಂದು ತನ್ನ ಬಗ್ಗೆ ತಾನೇ ಹೇಳಿಕೊಂಡಿದ್ದಾನೆ. ಜ್ಞಾನದ ಬೆಳಕು ಹತ್ತೂ ಕಡೆಯಿಂದ ಬರುತ್ತದೆ. ಅದನ್ನು ಸ್ವೀಕರಿಸಿದವರೇ ಸರ್ವಜ್ಞರಾಗುತ್ತಾರೆ ಎಂಬ ಅಭಿಪ್ರಾಯ ಇಲ್ಲಿ ವ್ಯಕ್ತವಾಗಿದೆ.

**ಸಾಲವನು ಕೊಂಬಾಗ ಹಾಲೋಗರುಂಡಂತೆ**
**ಸಾಲಿಗರು ಬಂದು ಎಳೆವಾಗ ಕಿಬ್ಬದಿಯ**
**ಕೀಲು ಮುರಿದಂತೆ ಸರ್ವಜ್ಞ.**

ಸಾಲವನ್ನು ಪಡೆಯುವಾಗ ಇದ್ದ ಸಂತೋಷವು ಸಾಲಿಗರು ಬಂದು ಸಾಲವನ್ನು ವಾಪಸ್ಸು ಕೇಳುವಾಗ ಇರುವುದಿಲ್ಲ. ಕಾರ್ಯ ಮತ್ತು ಅದರ ಫಲಗಳು ಹೇಗಿರುತ್ತವೆ ಎಂಬುದು ಈ ತ್ರಿಪದಿಯಲ್ಲಿ ಬಿಂಬಿತವಾಗಿದೆ. ಕರ್ಮದ ಫಲವೂ ಸಹ ಕಾರ್ಯಕ್ಕೆ ಸಂಬಂಧಿಸಿರುತ್ತದೆ. ಒಳ್ಳೆಯ ಕೆಲಸವು ಒಳ್ಳೆಯ ಫಲ ತರುತ್ತದೆ. ಮುಂದೆ ಬರುವ ಪರಿಸ್ಥಿತಿಯ ವಾಸ್ತವವನ್ನು ವಿವರಿಸುವ ಪ್ರಯತ್ನವು ಇಲ್ಲಿದೆ.

**ಚೆಚ್ಚನೆಯಾ ಮನೆಯಿರಲು ವೆಚ್ಚಕ್ಕೆ ಹೊನ್ನಿರಲು**
**ಇಚ್ಛೆಯನರಿವ ಸತಿ ಇರಲು**
**ಸ್ವರ್ಗಕ್ಕೆ ಕಿಚ್ಚು ಹಚ್ಚೆಂದ ಸರ್ವಜ್ಞ.**

ಮಾನವನು ತನ್ನಲ್ಲಿ ಇರುವಷ್ಟರಲ್ಲಿಯೇ ಸಂತೃಪ್ತಿಯಿಂದ ಜೀವನ ನಡೆಸಬಹುದು ಎಂಬುದನ್ನು ಸಾರುವ ಪದ್ಯ ಇದಾಗಿದೆ. ಇರುವುದರಲ್ಲಿಯೇ ಸ್ವರ್ಗವನ್ನು ಕಾಣಬೇಕು ಮತ್ತು ಇಲ್ಲಿರುವುದನ್ನು ಬಿಟ್ಟು ಇನ್ನೆಲ್ಲೋ ಇರುವುದರ ಕುರಿತು ಚಿಂತಿಸದೆ, ಇರುವುದನ್ನು ಅನುಭವಿಸಬೇಕು ಎಂಬ ಆಶಯವೂ ಸಹ ಇಲ್ಲಿದೆ.

**ಕುಲಗೆಟ್ಟವರ ಚಿಂತೆ ಒಳಗಿರ್ಪರಂತಲ್ಲ**
**ಕುಲಗೆಟ್ಟು ಶಿವನ ಮರೆಹೊಕ್ಕು ಋಷಿಗಳು**
**ಕುಲವಾದರಯ್ಯ ಸರ್ವಜ್ಞ**

ಕುಲದ ವ್ಯಾಕುಲಗಳನ್ನು ಸರ್ವಜ್ಞ ಸೂಕ್ಷ್ಮವಾಗಿ ಶೋಧಿಸಿದ್ದಾನೆ. ಜಾತಿಮತಗಳ ಆವರಣದಲ್ಲಿ ಬಂಧಿಸಲ್ಪಟ್ಟವರು ಬೇಗುದಿಗಳಿಗೆ ತುತ್ತಾಗುತ್ತಾರೆ. ಕುಲದ ಚೌಕಟ್ಟನ್ನು ಮೀರಿ ಹೊರಬಂದವರು ಮುಕ್ತತೆಯ ಆನಂದ ಅನುಭವಿಸುತ್ತಾರೆ. ಒಳಗಿರುವವರಿಗಿಂತ ಹೊರಬಂದವರಿಗೆ ನೆಮ್ಮದಿ ಹೆಚ್ಚು. ಕುಲಗೆಟ್ಟವರದ್ದೇ ಒಂದು ಕುಲ. ಅದು ದೈವಿಕ ಹೆಚ್ಚುಗಾರಿಕೆಯನ್ನು ಪಡೆದ ಜ್ಞಾನಿಗಳ ಕುಲ.

**ಹೊಲಸು ಮಾಂಸದ ಹುತ್ತ ಎಲುವಿನ ಹಂದರವು**
**ಹೊಲೆ ಬಲಿದ ತನುವಿನೊಳಗಿರ್ದುಮದರೊಳಗೆ**
**ಕುಲವನರಸುವರೆ ಸರ್ವಜ್ಞ**

ಮನುಷ್ಯ ದೇಹ ಹೊಲಸು ಮಾಂಸದ ಹುತ್ತ. ಜ್ಞಾನಿಗಳು ದೇಹದ ಬಗೆಗಿನ ವ್ಯಾಮೋಹ ಕಳೆದುಕೊಳ್ಳುವ ಪರಿ ಇದು. ಈ ಪರಿಯೇ ಆಧ್ಯಾತ್ಮ. ಆಧ್ಯಾತ್ಮಕ್ಕೂ ಆಚಾರಕ್ಕೂ ಸಂಬಂಧವಿಲ್ಲ. ಧರ್ಮ ಮತ್ತು ದೇವರ ಕಲ್ಪನೆ ಮಿತವಾದದ್ದು. ಕುಲದ ಕಲ್ಪನೆ ಇನ್ನೂ ನಿಕೃಷ್ಟ. ಹೊಲಸು ತುಂಬಿದ ದೇಹಕ್ಕೆ ಅಭಿಮಾನ ಪಡಬಹುದಾದ ಜಾತಿ ಎಂಬುದು ಇರಲು ಸಾಧ್ಯವೇ?

**– ಸಂಗ್ರಹ: ಎ.ಸತ್ಯನಾರಾಯಣ**



# ಸಿನಿಮಾ The Secret (2006) ರಹಸ್ಯ



ನಿರ್ದೇಶನ: ಡ್ರೀವ್ ಹೇರಿಯಟ್

ಸಹ ನಿರ್ದೇಶನ : ನೀನ್ ಬೈರ್ನ್, ಮಾರ್ಕ್ ಗೋಲ್ಡನ್ ಫೀನ್ ಡೇಮಿಯನ್ ಮೆಕ್ ಲಿಂಡನ್

ಬರೆದವರು : ರೋಂಡ ಬೈರ್ನ್ (ಪರಿಚಯಿಸಿದವರು)

ಬಿಡುಗಡೆಯಾದ ದಿನಾಂಕ: USA 26th - March - 2006

The Secret ಎಂಬ ಚಲನಚಿತ್ರವು ನಮ್ಮ ಮುಂದೆ ಪ್ರದರ್ಶನಗೊಳ್ಳುವಾಗ, ಅದು, ಈ ವಿಶ್ವದ ಅತಿ ಮಹತ್ತರವಾದ ರಹಸ್ಯವನ್ನು ನಮ್ಮ ಮುಂದೆ ತೆರೆದಿಡುತ್ತದೆ. ಸಾವಿರಾರು ವರ್ಷಗಳ ಹಿಂದೆಯೆ ಇದರ ಬಗ್ಗೆ ತಿಳಿದಿದ್ದ ಕೆಲವು ಮಹನೀಯರು ಈ ರಹಸ್ಯವನ್ನು ಕೆಲವು ಬುದ್ಧಿವಂತರಿಗೆ ಹೇಳಿಕೊಟ್ಟ ನಂತರ, ಕ್ರಮೇಣ ಒಬ್ಬರಿಂದ ಇನ್ನೊಬ್ಬರಿಗೆ ತಲುಪುತ್ತಾ ನಮ್ಮ ಕೈ ಸೇರುವಷ್ಟರಲ್ಲಿ ಇಷ್ಟು ಸಮಯ ಹಿಡಿದಿದೆ. ಭಾಗ್ಯದ ಬಾಗಿಲನು ತೆರೆಯುವ ಕೀಲಿಕೈ ಈಗ ನಮ್ಮ ಕೈಯಲ್ಲೇ ಇದೆ. ನೀವದನ್ನು ಓದುತ್ತಿರುವ ಬುದ್ಧಿವಂತರು. ಈ ರಹಸ್ಯವನ್ನು ಗಿಟ್ಟಿಸಿಕೊಂಡಿರುವ ನೀವೇ ಭಾಗ್ಯಶಾಲಿಗಳು. ಈ ಪ್ರಪಂಚದಲ್ಲಿ ನವಗೆ ಏನೆಲ್ಲ ಬೇಕಿದೆಯೋ ಅವೆಲ್ಲವನ್ನು ಪಡೆಯುವ ಮಾರ್ಗ ಇಲ್ಲಿದೆ. ಅಂದರೆ, ಎಲ್ಲೆಗಳಿಲ್ಲದ ಆನಂದ, ಹಣ, ಅಂತಸ್ತು, ಪ್ರೀತಿ, ಯೌವನ, ತೃಪ್ತಿ ತರುವ ಸಂಬಂಧಗಳು, ಆರೋಗ್ಯ, ಇತ್ಯಾದಿ, ಇವೆಲ್ಲವೂ ನಮ್ಮದಾಗುತ್ತದೆ. ಈ ರಹಸ್ಯದಲ್ಲಿ ಅನುಮಾನವೇ ಇಲ್ಲ. ವಿಶ್ವ ಖ್ಯಾತಿ ಹೊಂದಿದ ವಿಜ್ಞಾನಿಗಳು, ರಚನಕಾರರು, ತತ್ವಜ್ಞಾನಿಗಳು ಈಗ ನಮ್ಮ ಮುಂದೆ ಈ ರಹಸ್ಯವನ್ನು ಬಯಲು ಮಾಡಲಿದ್ದಾರೆ. ಈ ರಹಸ್ಯದಿಂದ ತಮ್ಮ ಬದುಕಿನ ತಿರುವನ್ನೇ ಬದಲಾಯಿಸಿ, ಮಹೋನ್ನತ ಸಾಧನೆಗಳನ್ನು ಮಾಡಲು ಸಹಾಯ ಮಾಡಿ, ಪ್ರಖ್ಯಾತಿ ಹೊಂದುವಲ್ಲಿ ಸಫಲರಾದ ಕೆಲವು ಗಣ್ಯವ್ಯಕ್ತಿಗಳು ಪ್ಲಾಟೊ, ನ್ಯೂಟನ್, ಕಾರ್ನೆಗಿ, ಬೀಥೋವೆನ್, ಶೇಕ್ಸ್ಪಿಯರ್, ಐನ್ಸ್ಟೈನ್.



ರ್ಹೋಂಡ ಬೈರ್ನ್ ತನ್ನ ಬಾಳಿನಲ್ಲಿ ಬಹಳಷ್ಟು ನೋವನ್ನು ಅನುಭವಿಸಿದ ನಂತರ, ಈ ರಹಸ್ಯದ ಬಗ್ಗೆ ತಿಳಿಯುತ್ತಾಳೆ. ಆಕೆಗೆ ಈ ರಹಸ್ಯವನ್ನು ಪತ್ತೆ ಹಚ್ಚಿದಾಗ ಪರಮಾಶ್ಚರ್ಯವಾಯಿತು. ತನ್ನ ಸಂಶೋಧನೆಯ ಮೂಲಕ ಈ ರಹಸ್ಯವನ್ನು ತಿಳಿದಿದ್ದ ಹಾಗೂ ಇತರರಿಗೆ ಹೇಳಿಕೊಡುತ್ತಿರುವ ಬಹಳಷ್ಟು ಮಂದಿ ಪ್ರಖ್ಯಾತ ವ್ಯಕ್ತಿಗಳಿದ್ದಾರೆ ಎಂಬುದನ್ನು ತಿಳಿಯುತ್ತಾಳೆ. ಇಂತಹ ಪ್ರಜ್ಞಾವಂತರೆಲ್ಲರನ್ನು ತನ್ನ ಸಾಕ್ಷ್ಯಚಿತ್ರಕ್ಕೆ ನೆರವು ನೀಡಲು ಆಹ್ವಾನಿಸುತ್ತಾಳೆ. ಏನಿದು ರಹಸ್ಯ? ಅದೇ ''ಆಕರ್ಷಣೆಯ ನಿಯಮ'' (Law of Attraction) ನಮ್ಮ ಬಾಳಿನಲ್ಲಿ ನಮ್ಮ ಬಳಿ ಇರುವುದೆಲ್ಲವನ್ನೂ ನಾವೇ ಸೆಳೆದಿದ್ದೇವೆ. ಬೈರ್ನ್ ಆಹ್ವಾನಿಸಿದ ಅಷ್ಟೂ ಮಂದಿ ಗಣ್ಯವ್ಯಕ್ತಿಗಳು, ಅಂದರೆ, ಡಾಕ್ಟರ್‌ಗಳು, ವಿಜ್ಞಾನಿಗಳು, ತತ್ವಜ್ಞಾನಿಗಳು, ಮನೋವಿಜ್ಞಾನಿಗಳು, ಶಾಸ್ತ್ರಜ್ಞರು, ದಾರ್ಶನಿಕರು, ಬಿಸಿನೆಸ್‌ಮೆನ್‌ಗಳು, ಫೈನಾನ್ಸ್‌ನವರು, ಫೆಂಗ್‌ಶೂಯಿ ಸಲಹೆಗಾರರು - ಎಲ್ಲರೂ ಈ ಒಂದು ವಿಚಾರವನ್ನೇ ವಿವರಿಸುವಂತಾದರು - ಅದೇ Law of Attraction. ಹೇಗೆ ನಾವು ಒಳ್ಳೆಯದನ್ನು ಮಾತ್ರ ಸೆಳೆದು ಕೆಟ್ಟದನ್ನು ದೂರವಿಡುವಂತೆ ಮಾಡುವುದು. ಈ ವಿಶ್ವದ ಗುಣ ಏನೆಂದರೆ, ''ನಮ್ಮ ಇಚ್ಛೆಗಳನ್ನು ನೆರವೇರಿಸುವುದು. ''ನಿಮ್ಮ ಇಚ್ಛೆ - ನನಗೆ ಅಪ್ಪಣೆ'' ಎನ್ನುತ್ತದೆ. ನಮಗೆ ತಿಳಿದಿರುವ ಎಲ್ಲ ಮಹಾನ್ ವ್ಯಕ್ತಿಗಳು ಇದೇ ನಿಯಮದ ಆಧಾರದ ಮೇಲೆ ತಮ್ಮ ಬೋಧನೆಗಳನ್ನು ಧೃಢಪಡಿಸಿದ್ದಾರೆ. ಅವರು ಸಾಧಿಸಿದ್ದೆಲ್ಲವೂ ಇದೇ ನಿಯಮಾನುಸಾರವಾಗಿದೆ. ಅಂದರೆ, ಆಕರ್ಷಣೆಯ ನಿಯಮಾನುಸಾರವಾಗಿದೆ. ಈ ರಹಸ್ಯದ ಆಧಾರದ ಮೇಲೆ, ಅಂದರೆ, ಆಕರ್ಷಣೆಯ ನಿಯಮವನ್ನು, ಅಂದರೆ, ಅದು ಯಾರೇ ಆಗಿರಲಿ, ತಮ್ಮ ಬಾಳಿನಲ್ಲಿ ಸಮೃದ್ಧಿಯನ್ನು ಸಾಧಿಸಬಹುದು. ಯಾವುದೇ ದೌರ್ಬಲ್ಯವನ್ನು ಬದಲಾಯಿಸಿ ಸಾಮರ್ಥ್ಯವನ್ನಾಗಿಸಬಹುದು. ಇದರಿಂದ ಶಾಂತಿ, ಅಂತಸ್ತು, ಐಶ್ವರ್ಯ, ಆರೋಗ್ಯ, ಶಕ್ತಿ ಎಲ್ಲವನ್ನೂ ಸಹ ಪಡೆಯಬಹುದು. ನೂರು ವರ್ಷ ಹಳೆಯ ಒಂದು ಪುಸ್ತಕವನ್ನು ಓದುವಾಗ ರ್ಹೋಂಡ ಬೈರ್ನ್ ಇದನ್ನು ಕಂಡುಕೊಂಡಳು. ಪ್ರತಿಯೊಂದು ಪುರಾತನ ಹಾಗೂ ಸುಪ್ರಸಿದ್ಧ ತತ್ವಗಳ ಅಂತರ್ಯವು ಈ ಆಕರ್ಷಣೆಯ ನಿಯಮದ ಆಧಾರದ ಮೇಲೆಯೇ ನಿಂತಿರುವುದು ಬಹಳ ಆಶ್ಚರ್ಯ ಉಂಟುಮಾಡುತ್ತದೆ.

ನಮ್ಮೆಲ್ಲರ ಬಾಳಿನಲ್ಲೂ ಹಾಸು ಹೊಕ್ಕಾಗಿರುವುದು ಈ ಆಕರ್ಷಣೆಯ ನಿಯಮವೊಂದೇ ಎಂಬುದನ್ನು ನಾವು ಮರೆಯಬಾರದು. ಇದನ್ನು ಅವಲಂಬಿಸಿದರೆ, ಕೇಳಿದ್ದನ್ನು ಕೊಡುವ ಮಂತ್ರದಂತೆ ಕೆಲಸಮಾಡುತ್ತದೆ. ನಿಮ್ಮ ಬಾಳಿನ ಪ್ರತಿ ಹಂತವನ್ನು ಆನಂದದಾಯಕವಾಗಿ ಬದಲಾಯಿಸುತ್ತದೆ. ನೀವು ಮಾಡಬೇಕಾಗಿರುವುದಿಷ್ಟೆ ''ಹೃದಯ ಪೂರ್ವಕವಾಗಿ ಬಯಸಿದ್ದನ್ನು ಪಡೆದೇ ಪಡೆಯುತ್ತೇವೆ ಎಂಬ ದೃಢ ನಂಬಿಕೆಯಿಂದಿದ್ದು, ಕಾಯಾ, ವಾಚಾ ಕರ್ಮಣ ಅದಕ್ಕೆ ಬದ್ಧರಾಗಿರುವುದು''. ಇದೇ ರಹಸ್ಯ. ನಿರ್ಮಾಪಕರಾಗಿ, ಬರಹಗಾರರಾಗಿ, ರ್ಹೋಂಡಾ ಬೈರ್ನ್ ಬಯಸುವುದೇನೆಂದರೆ, ನಾವೆಲ್ಲರೂ ಈ ರಹಸ್ಯವನ್ನು ಅರಿತು, ನಮ್ಮ ಬಾಳಿನಲ್ಲಿ ಆನಂದದಿಂದಿರಬೇಕೆಂದು. ಪ್ರತಿಯೊಬ್ಬ ಧ್ಯಾನಿಯೂ, ಪಿರಮಿಡ್ ಮಾಸ್ಟರ್ಸ್ ಹಾಗೂ ಪ್ರತಿಯೊಬ್ಬರೂ ನೋಡಲೇ ಬೇಕಾದ ಚಿತ್ರ '' The Secret '' ನಮ್ಮ ಆಲೋಚನೆಗಳ ಮೂಲಕ ನಾವೇ ನಮ್ಮ ಬದುಕನ್ನು ನಿರ್ಮಿಸಿಕೊಳ್ಳುತ್ತಿದ್ದೇವೆಂಬ ಸತ್ಯವನ್ನು ಈ ಚಿತ್ರ ಬೆಳಕಿಗೆ ತರುತ್ತದೆ. '' We create our own reality through our thoughts''

ಸಂಗ್ರಹ: **www. Imdb.com**

**ಈ ಸಿನಿಮಾದ ಸಿ.ಡಿ ಯನ್ನು ಕೊಳ್ಳಲು ಬಯಸುವವರು ಸಂಪರ್ಕಿಸ ಬೇಕಾದ ದೂರವಾಣಿ, ಚಂದು-9742063696.**



# ನಿತ್ಯ ಅನ್ನದಾನ ಸೇವಾ ಕಾರ್ಯಕ್ರಮ



ಪಿರಮಿಡ್ ವ್ಯಾಲಿಗೆ ಭೇಟಿ ನೀಡುವ ಧ್ಯಾನಿಗಳಿಗೆ ಉಚಿತ ಊಟದ ವ್ಯವಸ್ಥೆಯನ್ನು ಮಾಡುವ ಉತ್ತಮ ಉದ್ದೇಶದಿಂದ, ಪಿರಮಿಡ್ ಸ್ಪಿರಿಚ್ಯುಯಲ್ ಟ್ರಸ್ಟ್ (ಇಂಡಿಯಾ) 'ನಿತ್ಯ ಅನ್ನದಾನ ಸೇವೆ'ಯನ್ನು ಆರಂಭಿಸಿದೆ. ಇದರ ಪ್ರಮುಖ ಉದ್ದೇಶವೇನೆಂದರೆ, ಪಿರಮಿಡ್ ವ್ಯಾಲಿಯಲ್ಲಿ ದೊರೆಯುವ ಸೌಲಭ್ಯಗಳನ್ನು ಆರ್ಥಿಕವಾಗಿ ದುರ್ಬಲರಾದ ಜನತೆಗೂ ಸಹ ಕಡಮೆ ವೆಚ್ಚದಲ್ಲಿ ಒದಗಿಸುವುದಾಗಿದೆ.

ಆತ್ಮಕ್ಕೆ, ಧ್ಯಾನ ಎಂಬ ಆರೋಗ್ಯಕರ ಆಹಾರವನ್ನು ಪಡೆಯಲು, ಮೊದಲು ದೇಹಕ್ಕೂ ಸಹ ಆಹಾರ ಬೇಕು. ಅಂದರೆ, ಆಧ್ಯಾತ್ಮಿಕ ಜಿಜ್ಞಾಸುಗಳ ಕಲಿಕೆ ಮತ್ತು ಆತ್ಮೋದ್ಧಾರದ ಕಾರ್ಯವು ಚುರುಕಾಗಿ ನಡೆಯಲು, ಮೊದಲು, ತಮ್ಮ ದೈಹಿಕ ಅಗತ್ಯಗಳ ಚಿಂತೆಯಿಂದ ಅವರು ಮುಕ್ತರಾಗಬೇಕು. ಪಿರಮಿಡ್ ವ್ಯಾಲಿಯಲ್ಲಿ ಉಳಿಯುವ ಪ್ರತಿಯೊಬ್ಬ ಧ್ಯಾನಿಗೆ "ನಿತ್ಯ ಅನ್ನದಾನ ಸೇವೆ" ಯೋಜನೆಯಲ್ಲಿ ಪ್ರತಿನಿತ್ಯ ಎರಡು ಉಚಿತ ಊಟ ದೊರೆಯುವುದರಿಂದ, ಅವರು ಧ್ಯಾನದ ಎಡೆಗೆ ತಮ್ಮ ಪೂರ್ಣ ಗಮನವನ್ನು ನೀಡಲು ಸಾಧ್ಯವಾಗುತ್ತದೆ. ಪರಿಣಾಮಕಾರಿಯಾಗಿ, ನಿರಂತರವಾಗಿ ಈ ಯೋಜನೆಯನ್ನು ನಡೆಸಲು, ಟ್ರಸ್ಟ್ ಒಂದು 'ಶಾಶ್ವತ ನಿಧಿ'ಯನ್ನು ಸ್ಥಾಪಿಸಿದೆ. ವ್ಯಕ್ತಿಗಳು ಮತ್ತು ಸಂಘ-ಸಂಸ್ಥೆಗಳು ಈ ಯೋಜನೆಗೆ ತಮ್ಮ ದೇಣಿಗೆಗಳನ್ನು ಉದಾರವಾಗಿ ನೀಡಲು ಕೋರಲಾಗಿದೆ.

ಈ ಯೋಜನೆಗೆ ನೀವು ನೀಡುವ ಉದಾರವಾದ ಕೊಡುಗೆಗಳು ಈ ಕೆಳಕಂಡಂತೆ ಉಪಯುಕ್ತವಾಗುತ್ತವೆ.

- ಗ್ರಾಮೀಣ ವರ್ಗದ ಮತ್ತು ಆರ್ಥಿಕವಾಗಿ ದುರ್ಬಲರಾದ ಜನತೆಯು ಪಿರಮಿಡ್ ವ್ಯಾಲಿಗೆ ಭೇಟಿ ನೀಡುತ್ತಾರೆ ಮತ್ತು ಅವರ ಆಧ್ಯಾತ್ಮಿಕ ಪ್ರಗತಿಗೆ ಇದು ಸಹಾಯಕವಾಗುತ್ತದೆ.
- ದೈಹಿಕ ಮೂಲಭೂತ ಅಗತ್ಯಗಳ ಎಡೆಗೆ ಧ್ಯಾನಿಗಳ ಚಿಂತೆಗಳನ್ನು ದೂರ ಮಾಡಿ, ಪರಿಣಾಮಕಾರಿಯಾಗಿ ಧ್ಯಾನ ಮಾಡಲು ಅವರಿಗೆ ಅನುವುಮಾಡಿಕೊಡುವುದು ಸಾಧ್ಯವಾಗುತ್ತದೆ.
- ನಮ್ಮ ಆಧ್ಯಾತ್ಮಿಕ ಹೊಣೆಗಾರಿಕೆಯನ್ನು ನಿಭಾಯಿಸಲು ಸಹಕಾರಿಯಾಗುತ್ತದೆ.

**ಪಿರಮಿಡ್ ಸ್ಪಿರಿಚ್ಯುಯಲ್ ಸೊಸೈಟೀಸ್ ಮೂವ್‌ಮೆಂಟ್**

ಇದನ್ನು ಬ್ರಹ್ಮರ್ಷಿ ಪತ್ರೀಜಿಯವರು 1990ರಲ್ಲಿ ಸ್ಥಾಪಿಸಿದರು. ಪ್ರಸ್ತುತದಲ್ಲಿ ಇದು ಒಂದು ತನ್ನದೇ ರೀತಿಯಲ್ಲಿ ಮೊತ್ತಮೊದಲ ಹೊಸಯುಗದ ಆಧ್ಯಾತ್ಮಿಕ ಆಂದೋಲನವಾಗಿದೆ. ಪಿರಮಿಡ್ ಸ್ಪಿರಿಚ್ಯುಯಲ್ ಸೊಸೈಟಿಗಳು ಲಾಭ-ರಹಿತ, ಮತಾತೀತ, ವರ್ಗ-ರಹಿತ, ಸ್ವಯಂ-ಸೇವಾ ಸಂಸ್ಥೆಗಳಾಗಿವೆ. ಧ್ಯಾನ ಮತ್ತು ಸಸ್ಯಾಹಾರೀ ಜೀವನ ಕ್ರಮವನ್ನು ಪ್ರಚುರಪಡಿಸುವುದೇ ಇವುಗಳ ಪ್ರಮುಖ ಉದ್ದೇಶವಾಗಿದೆ ಮತ್ತು ಪ್ರತಿಯೊಬ್ಬರಿಗೂ ಸಹ ದೈಹಿಕ, ಮಾನಸಿಕ ಮತ್ತು ಬೌದ್ಧಿಕ ಆರೋಗ್ಯವನ್ನು ಒದಗಿಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸುವುದೇ ಮೂಲ ಗುರಿಯಾಗಿದೆ.

ಪಾವತಿ ಮಾಹಿತಿಗಳು ಡಿಮ್ಯಾಂಡ್ ಡ್ರಾಫ್ಟ್ ಮೂಲಕ ಪಾವತಿಸಬಹುದು.

'The Pyramid Spiritual Trust (India), Anna Dana Seva' ಎಂಬ ಹೆಸರಿನಲ್ಲಿ ಬ್ಯಾಂಕ್ ಡ್ರಾಫ್ಟನ್ನು ಪಡೆದು, ಭರ್ತಿಮಾಡಿದ ಡೊನೇಷನ್ ಫಾರಂನೊಂದಿಗೆ, ಪಿರಮಿಡ್ ಸ್ಪಿರಿಚ್ಯುಯಲ್ ಟ್ರಸ್ಟ್ (ಇಂಡಿಯಾ), #609/1, 15ನೇ ಕ್ರಾಸು, ಜೆ.ಪಿ.ನಗರ, 6ನೇ ಹಂತ, ಬೆಂಗಳೂರು - 560078 ಈ ವಿಳಾಸಕ್ಕೆ ಕಳುಹಿಸಬಹುದು.

**ದಾನಿಗಳಿಗೆ ದೊರೆಯುವ ಸೌಲಭ್ಯಗಳು:**

- ರೂ.10,000/-ವರೆಗಿನ ದೇಣಿಗೆ ನೀಡುವ ದಾನಿಗಳ ಹೆಸರನ್ನು
- ಪಿರಮಿಡ್ ವ್ಯಾಲಿಯಲ್ಲಿ ವಾರ್ಷಿಕವಾಗಿ ನಡೆಯುವ ಬುದ್ಧಪೂರ್ಣಿಮೆ ಕಾರ್ಯಕ್ರಮದಲ್ಲಿ ಪ್ರದರ್ಶಿಸುವ ಪೋಸ್ಟರ್‌ನಲ್ಲಿ ಪ್ರಕಟಿಸಲಾಗುವುದು.



- ರೂ.50,000/-ಕ್ಕೂ ಮೇಲ್ಪಟ್ಟು ದೇಣಿಗೆ ನೀಡುವವರ ಹೆಸರನ್ನು ಮೇಲೆ ಹೇಳಿದಂತೆ ಪೋಸ್ಟರ್‌ನಲ್ಲಿ ಪ್ರಕಟಿಸುವುದರೊಂದಿಗೆ, ಪಿರಮಿಡ್ ವ್ಯಾಲಿಯ ವೆಬ್‌ಸೈಟ್‌ನಲ್ಲಿಯೂ ಸಹ ಪ್ರಕಟಿಸಲಾಗುವುದು ಮತ್ತು ಪಿರಮಿಡ್ ವ್ಯಾಲಿಯಲ್ಲಿ ಒಂದು ವಾರದ ಕಾಲ ವಸತಿ ಸೌಲಭ್ಯವನ್ನು ಒಮ್ಮೆಗೆ ಉಚಿತವಾಗಿ ಒದಗಿಸಲಾಗುವುದು.
- ರೂ.2,50,000/-ರವರೆಗೆ ದೇಣಿಗೆ ನೀಡುವವರಿಗೆ ಈ ಮೇಲ್ಕಂಡ ಎಲ್ಲಾ ಸೌಲಭ್ಯಗಳನ್ನು ನೀಡುವುದರೊಂದಿಗೆ, ಅವರ ಹೆಸರನ್ನು ಪಿರಮಿಡ್ ವ್ಯಾಲಿಯಲ್ಲಿನ ದಾನಿಗಳ ಪ್ರದರ್ಶನ ಫಲಕದಲ್ಲಿ ಮತ್ತು ವೆಬ್‌ಸೈಟ್‌ನಲ್ಲಿ ಶಾಶ್ವತವಾಗಿ ಹಾಕಲಾಗುವುದು. ಅಲ್ಲದೆ, ವಾರ್ಷಿಕವಾಗಿ ಒಂದು ವಾರದ ಕಾಲದಂತೆ, 15 ವರ್ಷಗಳವರೆಗೆ ಪಿರಮಿಡ್ ವ್ಯಾಲಿಯಲ್ಲಿ ಉಚಿತ ವಸತಿ ಸೌಲಭ್ಯವನ್ನು ನೀಡಲಾಗುವುದು.
- ರೂ.2,50,000/-ಕ್ಕೂ ಮೇಲ್ಪಟ್ಟು ದೇಣಿಗೆ ನೀಡುವವರಿಗೆ ಮೇಲ್ಕಂಡ ಎಲ್ಲಾ ಸೌಲಭ್ಯಗಳೊಂದಿಗೆ, ವಾರ್ಷಿಕವಾಗಿ ಎರಡು ವಾರದ ಕಾಲದಂತೆ, 15 ವರ್ಷಗಳವರೆಗೆ ಪಿರಮಿಡ್ ವ್ಯಾಲಿಯಲ್ಲಿ ಉಚಿತ ವಸತಿ ಸೌಲಭ್ಯವನ್ನು ನೀಡಲಾಗುವುದು.

ಈ ಕೆಳಕಂಡ ಬ್ಯಾಂಕುಗಳ ಖಾತೆಗಳಿಗೆ ದೇಣಿಗೆಗಳನ್ನು ನೇರವಾಗಿ ಪಾವತಿಸಬಹುದು.

**ಬ್ಯಾಂಕ್ ವಿವರ:**

ಎಸ್.ಬಿ.ಐ., ಜೆ.ಪಿ.ನಗರ, ಬೆಂಗಳೂರು - 30794047532

ಆಂಧ್ರ ಬ್ಯಾಂಕ್, ಹಾರೋಹಳ್ಳಿ - 145810100007675

ಮತ್ತು ಬ್ಯಾಂಕಿನಲ್ಲಿ ಸಂದಾಯದ ವಿವರವನ್ನು 'ಡೊನೇಷನ್ ಫಾರಂ'ನಲ್ಲಿ ಒದಗಿಸಲು ಕೋರಿದೆ. ಇದಕ್ಕಾಗಿ ಇಲ್ಲಿರುವ ಫಾರಂಅನ್ನು ಭರ್ತಿಮಾಡಿ,

ಸ್ಕ್ಯಾನ್ ಮಾಡಿ,

**register@pyramidvalley.org**

ಈ ವಿಳಾಸಕ್ಕೆ ಇ-ಮೇಯ್ಲ್ ಮಾಡಬಹುದು.

ಪಿರಮಿಡ್ ಸ್ಪಿರಿಚ್ಯುಯಲ್ ಟ್ರಸ್ಟ್ (ಇಂಡಿಯಾ)
#609/1, 15ನೇ ಕ್ರಾಸು, ಜೆ.ಪಿ.ನಗರ, 6ನೇ ಹಂತ,
ಬೆಂಗಳೂರು - 560 078, ದೂ.: 080-4343 2525,
+91 94416 51351

**ಪಿರಮಿಡ್ ವ್ಯಾಲಿ ಕ್ಯಾಂಪಸ್:**

ಕೆಬ್ಬೆದೊಡ್ಡಿ ಗ್ರಾಮ, ಹಾರೋಹಳ್ಳಿ ಹೋಬಳಿ,
ಕನಕಪುರ ತಾಲ್ಲೂಕು, ರಾಮನಗರ ಜಿಲ್ಲೆ ದೂ.: +91 94481 77563

# ಮುಗುಳ್ನಗೆ



ಮರೆಗುಳಿ ಪ್ರೊಫೆಸರ್ ತಮ್ಮ ಹೆಂಡತಿಗೆ ಫೋನ್ ಮಾಡಿದರು, ''ಇವತ್ತು ಮನೆಗೆ ಬರಲಿಕ್ಕೆ ಆಗಲ್ಲ, ಕಾರಿನ ಗೇರ್, ಸ್ಟೀರಿಂಗ್ ಎಲ್ಲಾ ಕಳುವಾಗಿದೆ..'' ಎಂದು. ಆದರೆ, ಐದು ನಿಮಿಷದ ಬಳಿಕ ಮತ್ತೆ ಫೋನ್ ಮಾಡಿ.. ''ಬರ್ತಿದ್ದೇನೆ, ಮೊದಲು ಮಿಸ್ಸಾಗಿ ಕಾರಿನ ಹಿಂದಿನ ಸೀಟ್ ನಲ್ಲಿ ಕುಳಿತುಬಿಟ್ಟಿದ್ದೆ....'' ಅಂದರು.

★★★

ಸರ್: ''ಯಾಕ್ಲೇ ಗುಂಡಾ..ಮುಂದ ಇನ್ ಶರ್ಟ್ ಮಾಡಿ ಹಿಂದಾ ಹೊರಗಾ ಬಿಟ್ಟಿದೀಯಲ್ಲಾ?

ಗುಂಡ: ''ಮುಂದ ಅಂಗಿ ಹರ್ದೈತ್ರಿ... ಹಿಂದ ಪ್ಯಾಂಟ್ ಹರ್ದೈತ್ರಿ.. ಅದಕ್ಕೆ ರಿ ಸರ...''

★★★

ನೋಡಲು ಒಂದು ಆಂಗಲ್ ನಲ್ಲಿ ಗಾಂಧಿಯಂತೆ ಕಾಣುತ್ತಿದ್ದ ವ್ಯಕ್ತಿ ಸಲೂನ್‌ಗೆ ಬಂದ. ತಲೆಯಲ್ಲಿ ಯಾವ ಕಡೆಯಿಂದ ಕೂಡಿಸಿದರೂ ಒಂಭತ್ತಕ್ಕಿಂತ ಹೆಚ್ಚು ಕೂದಲು ಕಾಣ್ತಿಲ್ಲ. ಅವನ ತಲೆ ನೋಡಿ ಸಿಟ್ಟಾದ ಸಲೂನಿನ ಮುತ್ತು, ''ಏನ್ಸಾರ್ ಕೌಂಟ್ ಮಾಡಲಾ? ಕಟ್ ಮಾಡಲಾ?'' ಎಂದು ಕೇಳಿದ್ದಕ್ಕೆ, ಆ ವ್ಯಕ್ತಿ ವಿನಮ್ರತೆಯಿಂದ..''ಕಲರ್ ಮಾಡು..'' ಅಂದ!

★★★

ಕಳೆದ ಸಲ ಮರೆಗುಳಿ ಪ್ರೊಫೆಸರ್ ಅಮೇರಿಕಾಗೆ ಹೋಗಿದ್ದಾಗ ಅಲ್ಲೊಂದು ಮೆಷೀನ್ ನೋಡಿದರು. ಅದು ಕಳ್ಳರನ್ನು ಹಿಡಿಯುವ ಯಂತ್ರವಾಗಿತ್ತು. ಅಲ್ಲೇ ಸಾಕ್ಷಾತ್ ಅವರ ಕಣ್ಣೆದುರೇ ಘಂಟೆಗೆ ಹತ್ತರ ಲೆಕ್ಕದಲ್ಲಿ ಕಳ್ಳರನ್ನು ಹಿಡಿಯಿತು. ಖುಷ್ ಆದ ಪ್ರೊಫೆಸರ್ ಭಾರಿ ಮೊತ್ತ ತೆತ್ತು ಮೆಷೀನ್ ಖರೀದಿಸಿ, ಕರ್ನಾಟಕದ ಪೋಲೀಸರಿಗೆ ತೋರಿಸುತ್ತೇನೆ ಅಂತ ಹೇಳಿಕೊಳ್ಳುತ್ತಿದ್ದರು.

ಆದರೆ, ಇಲ್ಲಿ ಇಟ್ಟ ಮಾರನೇ ದಿನವೇ ಮೆಷೀನ್ ಕಳುವಾಯಿತಂತೆ!

★★★

ಭೀಮನು ಧುರ್ಯೋದನನನ್ನು ಹೇಗೆ ಕೊಂದನು?

ಒಂದು ಮಾರ್ಕಿನ ಪ್ರಶ್ನೆಯಾದರೆ ಪ್ರೊಫೆಸರರ ಮಗ ಅಷ್ಟು ತಲೆಕೆಡಿಸಿಕೊಳ್ಳುತ್ತಿರಲಿಲ್ಲ. ಅಷ್ಟು ದಡ್ಡನೆಂದು ತಿಳಿದಿರೇ? ಆ ಪ್ರಶ್ನೆ 15 ಅಂಕಕ್ಕೆ ಕೇಳಲ್ಪಟ್ಟಿತ್ತು. ಅಗ್ಲೇ ಮೇಷ್ಟ್ರು ತುಂಬಾ ಸಲ ಹೇಳಿದ್ದರು ಹದಿನೈದು ಮಾರ್ಕಿನ ಪ್ರಶ್ನೆಗೆ ಉತ್ತರಿಸುವಾಗ ಕೊನೆಯ ಪಕ್ಷ ಒಂದು ಪುಟವಾದರೂ ಬರೆಯಲೇಬೇಕೆಂದು. ಪ್ರಶ್ನೆ ಕೇಳುವವರಿಗೆ ಕಾಮನ್ ಸೆನ್ಸ್ ಬೇಡವೇ ಅಂತ ಬಯ್ದುಕೊಳ್ಳುತ್ತಾ, ಕೊನೆಗೆ ಒಂದು ಉಪಾಯ ಕಂಡುಕೊಂಡ.

''ಭೀಮನು ಧುರ್ಯೋಧನನನ್ನು ಗುದ್ದಿ ಗುದ್ದಿ ಗುದ್ದಿ ಗುದ್ದಿ.....'' ಹೀಗೆ ಬರೆಯುತ್ತಾ ಪುಟದ ಕೊನೆಗೆ, '' .... ಗುದ್ದಿ ಕೊಂದನು.'' ಹೀಗೆ ಮುಗಿಸಿದ!

★★★

ಗಂಡ ತನ್ನ ಹೆಂಡತಿಗೆ ಒಂದು ಕಾರು ಕೊಡಿಸಿದ. ಆಕೆಯಿಂದ ಗಂಡನಿಗೆ ಫೋನು ಬಂತು.

ಹೆಂಡತಿ: ''ಕಾರಿನ ಎಂಜಿನ್ನೊಳಗೆ ನೀರು ಸೇರಿದೆ.''

ಗಂಡ: ''ಕಾರು ಎಲ್ಲಿದೆ?''

ಹೆಂಡತಿ: ''ಕೆರೆಯೊಳಗೆ ಮುಳುಗಿದೆ.''

★★★

ಹೆಂಗಸೊಬ್ಬಳು ಗೆಳತಿಗೆ ಹೇಳುತ್ತಿದ್ದಳು: ''ನನ್ನ ಮದುವೆಯಾದ ಮೇಲೆ ಗಂಡ ಲಕ್ಷಾಧೀಶ್ವರನಾದ.''

ಗೆಳತಿ: ''ಹೌದೆ, ಮೊದಲು ಏನಾಗಿದ್ದ?''

ಹೆಂಗಸು: ''ಕೋಟ್ಯಾಧೀಶನಾಗಿದ್ದ.''

★★★

ಬ್ರಿಟಿಷ್ ವ್ಯಕ್ತಿಯೊಬ್ಬ ಭಾರತೀಯನಿಗೆ ಕೇಳಿದ: ''ಭಾರತೀಯರೆಲ್ಲರ ಬಣ್ಣವು ಬೇರೆ ಬೇರೆಯಾಗಿದೆ ಏಕೆ? ನೋಡು, ನಾವು ಎಲ್ಲರೂ ಬೆಳ್ಳಗೇ ಇದ್ದೇವೆ.'' ಭಾರತೀಯ: ''ಏಕೆಂದರೆ, ಕುದುರೆಗಳ ಬಣ್ಣ ಬೇರೆ ಬೇರೆಯಾಗಿರುತ್ತದೆ. ಆದರೆ, ಕತ್ತೆಗಳು ಒಂದೇ ರೀತಿ ಇರುತ್ತವೆ!''

★★★

''ಸ್ವಾಮಿಗಳು ಯಾಕೆ ಮರದ ಚಪ್ಪಲಿ ಹಾಕಿರುತ್ತಾರೆ?'' ''ಯಾಕೆ ಅಂದ್ರೆ, ಹುಡ್ಗೀರು ಕಾಲು ಮುಟ್ಟಿ ನಮಸ್ಕಾರ ಮಾಡಿದಾಗ, ಶಾರ್ಟ್ ಸರ್ಕ್ಯೂಟ್ ಆಗದೇ ಇರಲಿ ಅಂತಾ!''

- ಸಂಗ್ರಹಣೆ: ಎ.ಸತ್ಯನಾರಾಯಣ

# ಕರ್ನಾಟಕ ಪಿರಮಿಡ್ ಧ್ಯಾನ ಪ್ರಚಾರ ಟ್ರಸ್ಟ್

**ಬ್ರಹ್ಮರ್ಷಿ ಪತ್ರೀಜಿ ಅವರ ಸಂಕಲ್ಪ:**

' ಧ್ಯಾನ ಜಗತ್ 2012 ' ಇದು ಬ್ರಹ್ಮರ್ಷಿ ಸುಭಾಷ್ ಪತ್ರೀಜಿಯವರ ನಿನಾದ. ನಾವಿರುವ ಭೂಮಂಡಲವನ್ನು ರಕ್ಷಿಸಿಕೊಳ್ಳಬೇಕಾದುದು ನಮ್ಮೆಲ್ಲರ ಆದ್ಯ ಕರ್ತವ್ಯ. ನಾವು ನಮ್ಮ ಮಕ್ಕಳಿಗಾಗಿ ಹಣ ಆಸ್ತಿಗಳು ಏನೆಲ್ಲಾ ಮಾಡುತ್ತೇವೆ. ಆದರೆ ಅವರು ಮುಂದಿನ ದಿನಗಳಲ್ಲಿ ಜೀವಿಸಲು ಸಾಧ್ಯವಾಗದೇ ಇರುವ ರೀತಿಯಲ್ಲಿ ಭೂಮಂಡಲ ಬದಲಾಗುತ್ತಿದೆ. ಇದಕ್ಕೆ ನಾವೆಲ್ಲರೂ ಕೂಡ ಕಾರಣರು. ಈಗ ನಮ್ಮ ಮುಂದಿನ ಪೀಳಿಗೆಗೆ ಬೇಕಾಗಿರುವುದು ಹಣ ಅಂತಸ್ತು ಅಲ್ಲವೇ ಅಲ್ಲ. ಅವರಿಗೆ ಬೇಕಾಗಿರುವುದು ಸ್ವಚ್ಛವಾದ ನಿಸರ್ಗದಿಂದ ಕೂಡಿದ ಈ ಭೂಮಿಯ ಸಹಜತ್ವ

**' ಧ್ಯಾನ ಜಗತ್ 2012' ಯಾಕೆ?**

ಮುಂದೊಂದು ದಿನ '' ಗ್ಲೋಬಲ್ ವಾರ್ಮಿಂಗ್ '' ಎಂಬ ಮಹಾಮ್ಮಾರಿ ಈ ಭೂಮಿಯನ್ನು ಅಲ್ಲೋಲ ಕಲ್ಲೋಲ ಮಾಡಲಿದೆ ಎಂಬುದು ಕಠೋರ ಸತ್ಯ. ಆದರಿಂದ ಈ ಭೂಮಿಯನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಧ್ಯಾನ ಜಗತ್ ನಿರ್ಮಾಣವಾಗಬೇಕಾಗಿದೆ.

**' ಧ್ಯಾನ ಜಗತ್ 2012 ' ಗಾಗಿ ಕಂಕಣ : ಟ್ರಸ್ಟ್ ಉಗಮ :**

ಈ ಭೂಮಂಡಲದ ಬಿಸಿಯಿಂದ (ಗ್ಲೋಬಲ್ ವಾರ್ಮಿಂಗ್ ) ಪೃಥ್ವಿಯನ್ನು ರಕ್ಷಿಸಲು ನಾವೆಲ್ಲ ಕಂಕಣಬದ್ಧರಾದರೆ, ಅದನ್ನು ತಡೆಗಟ್ಟಲು ಸಾಧ್ಯವಿದೆ. ಆದರೆ 2012 ತುಂಬಾ ಹತ್ತಿರದಲ್ಲಿದೆ. ಇಂದಿನಿಂದ ಪ್ರತಿದಿನ, ಪ್ರತಿ ಕ್ಷಣವೂ ಸಹ ನಮಗೆ ಅತ್ಯಮೂಲ್ಯವಾದುದು. ಅದಕ್ಕಾಗಿಯೇ ನಾವು ಕರ್ನಾಟಕ ಧ್ಯಾನ ಪ್ರಚಾರ ಟ್ರಸ್ಟ್ ಸ್ಥಾಪಿಸಿರುವುದು.

**ಟ್ರಸ್ಟ್‌ನ ಉದ್ದೇಶಗಳು:**

1. ಪ್ರತಿಯೊಬ್ಬರ ಮನಸ್ಸು ಪರಿಶುದ್ಧವಾಗಿರಬೇಕು

2. ನಾವು ಕೇವಲ ದೇಹವಲ್ಲ, ನಾವು ಅಪಾರ ಪ್ರಾಣಶಕ್ತಿಯಿಂದ ತುಂಬಿಕೊಂಡಿರುವ ಪರಮಚೇತನ ಎಂಬುದನ್ನು ಎಲ್ಲರಿಗೂ ತಿಳಿಯುವಂತೆ ಮಾಡುವುದು.

3. ನಾವು ಹೇಗೆ ಸ್ವಚ್ಛಂದವಾಗಿ ಜೀವಿಸುತ್ತಿದ್ದೇವೋ ಹಾಗೇಯೇ ಉಳಿದ ಎಲ್ಲಾ ಜೀವ ಜಂತುಗಳು, ಜಲಚರಗಳು ವೃಕ್ಷರಾಶಿಗಳು ನಮ್ಮಂತೆ ಜೀವಿಸಲು ಅವುಗಳಿಗೆ ಅವಕಾಶ ಕಲ್ಪಿಸಿಕೊಡುವ ತಿಳುವಳಿಕೆಯನ್ನು ಎಲ್ಲರಲ್ಲಿ ಮೂಡಿಸುವುದು.

4. ನಾವೆಲ್ಲರೂ ಸಸ್ಯಾಹಾರಿಗಳಾಗಿ ಗಿಡಮರಗಳು ಬೆಳೆಸುವುದು ಹಾಗೂ ಮನಸ್ಸಿನಲ್ಲಿರುವ ಮಲಿನವನ್ನು ಸಂಪೂರ್ಣವಾಗಿ ಅಳಿಸಿ ಹಾಕುವುದು.

5. ಜಾತಿ, ಮತ, ಪ್ರಾಂತೀಯತೆ, ದೇಶವೆಂಬ ಎಲ್ಲ ಮಿತಿಗಳನ್ನು ದಾಟಿ ಜೀವಿಸುವುದು.

6. ಮೊದಲು ಕರ್ನಾಟಕವನ್ನು ಒಂದುಗೂಡಿಸುವ ನಂತರ ದೇಶವನ್ನು ತದ ನಂತರ ಪ್ರಪಂಚವನ್ನು ಒಂದುಗೂಡಿಸುವ,

   ಪ್ರಯತ್ನದಲ್ಲಿ ಪ್ರತಿಯೊಬ್ಬರು ಭಾಗಿಯಾಗುವಂತೆ ಮಾಡುವುದು.

7. ಟ್ರಸ್ಟ್‌ಗೆ ದೊರೆಯುವ ಎಲ್ಲಾ ಮಾಹಿತಿಗಳನ್ನು ಎಲ್ಲರ ಜೊತೆಗೆ ಸಮರ್ಪಕವಾಗಿ ಹಂಚಿಕೊಳ್ಳುವುದಕ್ಕಾಗಿ ಒಂದು ವಿಶೇಷವಾದ ವೇದಿಕೆ ನಿರ್ಮಿಸುವುದು.

8. ಪ್ರಕೃತಿಗೆ ಹೊಂದಿಕೊಂಡು ಹೇಗೆ ಜೀವನ ನಡೆಸಬೇಕೆಂಬುದು ತಿಳಿದು ತನ್ಮೂಲಕ ' ಪರಿಸರ ಪ್ರೇಮಿ ' ಗಳಾಗಿ ಜೀವಿಸುವ ಕಲೆಯನ್ನು ಕಲಿಯುವುದು.

9. ಉದ್ದೇಶಿತ ಟ್ರಸ್ಟ್‌ನ ಆಜೀವ ಸದಸ್ಯರಿಗೆ (ಲೈಫ್ ಮೆಂಬರ್‌ಗೆ) ವಿಶೇಷ ಸೌಲಭ್ಯಗಳನ್ನು ಒದಗಿಸುವುದು.

10. ವಿಶ್ವದ ಮಹಾನ್ ಆಧ್ಯಾತ್ಮಿಕ - ಶಾಸ್ತ್ರಜ್ಞರ ಹಲವಾರು ಕೃತಿಗಳನ್ನು ಕನ್ನಡಕ್ಕೆ ತಂದು ಕನ್ನಡ ಭಾಷೆಯ ಕಂಪಿನ ಜೊತೆಯಲ್ಲಿ ವಿಶ್ವಭಾಷಿಕರ ಸೊಂಪು ಸಮ್ಮಿಳಿತಗೊಳಿಸುವುದು.

11. ಬ್ರಹ್ಮರ್ಷಿ ಪತ್ರೀಜಿಯವರ ತೆಲುಗಿನಲ್ಲಿರುವ ನೂರಾರು ಪರಿಕಲ್ಪನೆಗಳನ್ನು ಭಾಷಣಕಾರರಿಂದ ಹಾಗೂ ಸಂಗೀತದ ಸಮ್ಮಿಲನದೊಂದಿಗೆ ಕನ್ನಡದ ಧ್ವನಿ ಸುರುಳಿಗಳನ್ನಾಗಿ ಹೊರತರುವುದು.

12. ಭಾರತಾದ್ಯಂತವಿರುವ ಋಷಿಗಳು, ಶರಣರು, ಸಂತರು, ಯೋಗಿಗಳು ತಪಸ್ವಿಗಳು ಸಂಚರಿಸಿದ ಹಾಗೂ ಅವರು ಈ ನಾಡಿಗೆ ತಮ್ಮ ವಾಣಿಯಿಂದ ಸಂದೇಶಗಳನ್ನು ನೀಡಿದ ಸ್ಥಳಗಳನ್ನು ಆರಿಸಿ ಅಂತಹ ಸ್ಥಳಕ್ಕೆ ನಮ್ಮ **''ಟೂರ್ಸ್ ಮತ್ತು ಟ್ರಕ್ಕಿಂಗ್''** ಕಮಿಟಿ ಮೂಲಕ ಪ್ರತಿ ತಿಂಗಳು ಯಾತ್ರೆಯನ್ನು ಏರ್ಪಡಿಸುವ ಮೂಲಕ ಧ್ಯಾನ ಮಾಡುವ ಮತ್ತು ಧ್ಯಾನಾನುಭವ ಪಡೆಯುವ ಯೋಗವನ್ನು ಕಲ್ಪಿಸುತ್ತಿದ್ದೇವೆ.

13. ಬೆಂಗಳೂರಿನಲ್ಲಿ ಈಗಾಗಲೇ ನಿರ್ಮಿಸಿರುವ ವಿಶ್ವಾದಲ್ಲಿಯೇ ಅತಿ ದೊಡ್ಡ ಪಿರಮಿಡ್ಡನ್ನು ತೋರಿಸುವುದು ಹಾಗೂ ಅದರ ವಿಶೇಷತೆಯನ್ನು ವಿವರಿಸುವುದು.

14. ಮಾನಸಿಕ, ಆಧ್ಯಾತ್ಮಿಕ ಹಾಗೂ ಪ್ರಾಪಂಚಿಕವಾದ ಹಲವಾರು ಮಾರ್ಪಾಡುಗಳನ್ನು ನಮ್ಮ ನಮ್ಮಲ್ಲಿ ತರಲು ಪ್ರತಿ ತಿಂಗಳು ಪ್ರತಿಯೊಂದು ಜಿಲ್ಲೆಯಲ್ಲಿ ವಿಶೇಷವಾದ ಶಿಬಿರವನ್ನು ಏರ್ಪಡಿಸುವುದು.

15. ಪ್ರತಿ ತಿಂಗಳು ಒಂದು ಎರಡು ಮೂರನೇ ತಾರೀಖಿನಲ್ಲಿ ಕರ್ನಾಟಕದ ಪ್ರತಿಯೊಂದು ಗ್ರಾಮಗಳಿಂದ ವಿಲೇಜ್ ಟು ವ್ಯಾಲಿ ಎಂಬ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವುದು ಮತ್ತು ಪ್ರತಿಯೊಬ್ಬರಿಗೂ ವಿಶ್ವಾದ ಅತಿ ದೊಡ್ಡ ಪಿರಮಿಡ್‌ನ್ನು ತೋರಿಸುವುದು ಹಾಗೂ ಬ್ರಹ್ಮರ್ಷಿ ಪತ್ರೀಜಿಯವರ ದರ್ಶನ ಮಾಡಿಸುವುದು.

16. ಪಿರಮಿಡ್ ವ್ಯಾಲಿಗೆ ಸಂದರ್ಶನಕ್ಕಾಗಿ ಬಂದವರಿಗೆ ಪಿರಮಿಡ್ ಧ್ಯಾನದಿಂದೊದಗುವ ಮಹತ್ವದ ಲಾಭಗಳನ್ನು ತಿಳಿಸಿಕೊಡುವ ವ್ಯವಸ್ಥೆ ಮಾಡಿಕೊಡುವ ಜೊತೆಗೆ, ಅವರಿಗೆ ಉಚಿತ ವಸತಿ, ಊಟದ ವ್ಯವಸ್ಥೆ ಏರ್ಪಡಿಸುವುದು.

## ಆಜೀವ ಸದಸ್ಯತ್ವ (ಲೈಫ್ ಮೆಂಬರ್) ಪಡೆಯಲು ದೇಣಿಗೆ ರೂ.2500/-

### ಆಜೀವ ಸದಸ್ಯರಿಗೆ ಕೆಳಕಂಡಂತೆ ಸೌಲಭ್ಯಗಳು ದೊರೆಯುತ್ತದೆ.

- ಧ್ಯಾನ ಕಸ್ತೂರಿ ಮಾಸ ಪತ್ರಿಕೆ 2 ವರ್ಷ ಉಚಿತ.
- ನಮ್ಮಲ್ಲಿ ಮುದ್ರಿತವಾದ ಪ್ರತಿ ಪುಸ್ತಕ, ಸಿ.ಡಿ. ಬೆಲೆಯಲ್ಲಿ 20 % ಡಿಸ್ಕೌಂಟ್
- ನಾವು ನಡೆಸಿಕೊಡುವ ಶಿಬಿರಗಳಿಗೆ 10% ಡಿಸ್ಕೌಂಟ್.
- ಟೂರ್ಸ್ ಮತ್ತು ಟ್ರೆಕ್ಕಿಂಗ್‌ನಲ್ಲಿ 5% ಡಿಸ್ಕೌಂಟ್.
- 2 ವರ್ಷ ಉಚಿತವಾಗಿ ಪಡೆದ ನಂತರ, ಮತ್ತೆ ನಾವು ಧ್ಯಾನ ಕಸ್ತೂರಿಗೆ ಚಂದಾದಾರರಾದರೆ 10% ಡಿಸ್ಕೌಂಟ್.
- ಪ್ರತಿ ತಿಂಗಳು ಎಲ್ಲಾ ವಿವರಗಳೊಂದಿಗೆ ನಿಮಗೆ ಮಾಹಿತಿ ಸಮರ್ಪಿಸಲಾಗುತ್ತದೆ. ಹಾಗೂ ನಿಮಗೆ ಅಗತ್ಯವಿರುವ ಎಲ್ಲ ರೀತಿಯ ಮಾಹಿತಿಗಳು ದೂರವಾಣಿಯಲ್ಲಿ ಲಭ್ಯವಾಗುವಂತೆ ವ್ಯವಸ್ಥೆಗೊಳಿಸಲಾಗುವುದು.
- ಪಿರಮಿಡ್ ವ್ಯಾಲಿಯಲ್ಲಿ ನಡೆಯುವ ಎಲ್ಲಾ ಶಿಬಿರಗಳಿಗೆ 5% ಶೇಕಡಾ ರಿಯಾಯಿತಿಯನ್ನು ಕೊಡಲಾಗುವುದು.

## ಪೋಷಕರು (ಪ್ಯಾಟ್ರನ್) ಪಡೆಯಲು ದೇಣಿಗೆ ರೂ.5,000/-

ಧ್ಯಾನ ಕಸ್ತೂರಿ ಪೋಷಕರು ಪ್ರತಿಯೊಬ್ಬ ಪೋಷಕರಿಗೆ ಐದು ವರ್ಷ ಧ್ಯಾನ ಕಸ್ತೂರಿ ಉಚಿತವಾಗಿ ನೀಡಲಾಗುತ್ತದೆ. ಹಾಗೂ ಪೋಷಕರ ಕುಟುಂಬದ ಫೋಟೋವನ್ನು ಧ್ಯಾನ ಕಸ್ತೂರಿಯಲ್ಲಿ ಮುದ್ರಿಸಲಾಗುತ್ತದೆ. ಅಲ್ಲದೆ, ಅವರ ವಿವರಗಳನ್ನು ನೀಡಲಾಗುತ್ತದೆ ಮತ್ತು ಲೈಫ್ ಮೆಂಬರ್‌ಗೆ ಲಭ್ಯವಿರುವ ಸೌಲಭ್ಯಗಳನ್ನು ನೀಡಲಾಗುತ್ತದೆ.

### ಪ್ರಮುಖ ಸೂಚನೆ :

ನಮ್ಮ ಧ್ಯಾನ ಕಸ್ತೂರಿ ಪುಸ್ತಕಗಳು ನಿಮಗೆ ತಲುಪದಿದ್ದಲ್ಲಿ, ಬೇರೆಯವರಿಗೂ ಈ ಪುಸ್ತಕ ದೊರೆಯ ದಿದ್ದಲ್ಲಿ
ಈ ದೂರವಾಣಿಯನ್ನು ಸಂಪರ್ಕಿಸಿ : **9902761761**

## ಆಜೀವ ಸದಸ್ಯತ್ವ (ಲೈಫ್ ಮೆಂಬರ್) / ಪೋಷಕರು / ಧ್ಯಾನ ಕಸ್ತೂರಿಯ ಚಂದಾ ನಮೂನೆ

ಇವರಿಗೆ,

**ಕರ್ನಾಟಕ ಪಿರಮಿಡ್ ಧ್ಯಾನ ಪ್ರಚಾರ ಟ್ರಸ್ಟ್,**

**ನಂ.126, 2ನೇ ಮಹಡಿ, 7ನೇ ಮುಖ್ಯರಸ್ತೆ, 4ನೇ ಬ್ಲಾಕ್,**

ಪೊಲೀಸ್ ಸ್ಟೇಷನ್ ಎದುರು, ಜಯನಗರ, ಬೆಂಗಳೂರು - 560 011.

ಫೋನ್ : 080-26646899, 9481359920, 9902761761.

ಮಾನ್ಯರೇ,

ಧ್ಯಾನ ಪ್ರಚಾರ ಟ್ರಸ್ಟ್‌ನ ಆಜೀವ ಸದಸ್ಯತ್ವವನ್ನು ಪಡೆಯಲು ರೂ ......................... ನ್ನು ಧ್ಯಾನ ಪ್ರಚಾರ ಟ್ರಸ್ಟ್‌ನ ವಿಳಾಸಕ್ಕೆ ಪಾವತಿ ಮಾಡಿ ಕಳುಹಿಸಲಾಗಿದೆ. ಡಿ.ಡಿ. ಸಂಖ್ಯೆ ................ ತಾರೀಖು ........................... ಕಾಲಾವಧಿ ................................

ಹೆಸರು ಮತ್ತು ವಿಳಾಸ : ..........................................................................................

ಜಿಲ್ಲೆ : .................................... ರಾಜ್ಯ : ..................................... ಪಿನ್ ಕೋಡ್ : ..................................................

ಇ-ಮೇಲ್ ............................................................................ ಫೋನ್ : ............................................

**1 ವರ್ಷಕೆ ಚಂದ: 300/-     2 ವರ್ಷಕೆ ಚಂದ: 550/-**




ಬಳ್ಳಾರಿಯಲ್ಲಿ ಶ್ರೀ ವೀರರಾಘವರಾವ್‌ರವರ ಮೂರು
ದಿವಸಗಳ ಉಚಿತ ಧ್ಯಾನ ಶಿಕ್ಷಣ



ಪಿರಮಿಡ್ ವ್ಯಾಲಿಯಲ್ಲಿ ಪತ್ರೀಜಿ



ಮಾನಸ ಸರೋವರ ಯಾತ್ರೆಯಲ್ಲಿ ಪಾಲ್ಗೊಂಡ ಪಿರಮಿಡ್ ಮಾಸ್ಟರ್ಸ್



ಪಿರಮಿಡ್ ವ್ಯಾಲಿಯಲ್ಲಿ ಹೊಸ transformer ಉದ್ಘಾಟನೆ



ಪಿರಮಿಡ್ ವ್ಯಾಲಿಯಲ್ಲಿ ಸುಸಜ್ಜಿತ ಅಡುಗೆ ಮನೆ ಉದ್ಘಾಟನೆ



ಪಿರಮಿಡ್ ವ್ಯಾಲಿಯಲ್ಲಿ ಹೊಸ ಧ್ಯಾನ ಪ್ರಚಾರ ವಾಹನದ ಉದ್ಘಾಟನೆ

REGISTRATION DATED : 01-10-2008 ; REG. NO : RNP / BGS / 2105 / 2008-10

# ಪಿರಮಿಡ್ ಧ್ಯಾನಿಗಳ ಹದಿನೆಂಟು ಮಾರ್ಗದರ್ಶಕ ಸೂತ್ರಗಳು



1) ಸರಿಯಾದ ರೀತಿಯಲ್ಲಿ, ಅಂದರೆ, ಆನಾಪಾನಸತಿ ಪದ್ಧತಿಯಲ್ಲಿ ಕ್ರಮವಾಗಿ, ತಪ್ಪದೆ ನಿಯಮಿತವಾಗಿ ಧ್ಯಾನ ಮಾಡಬೇಕು ಮತ್ತು ಪ್ರತಿಯೊಬ್ಬರಿಗೂ ಈ ರೀತಿಯ ಸರಿಯಾದ ಧ್ಯಾನವನ್ನು ಕಲಿಸಬೇಕು.

2) ಸರಿಯಾದ ಆಧ್ಯಾತ್ಮಿಕ ಪುಸ್ತಕಗಳನ್ನು ಓದಬೇಕು; ಆ ಪುಸ್ತಕಗಳನ್ನು ಇತರರೂ ಓದುವಂತೆ ಮಾಡಬೇಕು.

3) ಧ್ಯಾನಾನುಭವಗಳನ್ನು, ಪುಸ್ತಕಗಳಿಂದದೊರೆತ ಆಧ್ಯಾತ್ಮಿಕ ಜ್ಞಾನವನ್ನು ಪ್ರತಿಯೊಬ್ಬ ಧ್ಯಾನಿಯೊಡನೆಯೂ ಹಂಚಿಕೊಳ್ಳುತ್ತಿರಬೇಕು.

4) ಪ್ರತಿ ದಿನವೂ ಸಾಧ್ಯವಾದಷ್ಟು ಹೆಚ್ಚು.... ಹೆಚ್ಚು.... ಸಮಯ ಮೌನದಲ್ಲಿ ಇರಬೇಕು.

5) ಹುಣ್ಣಿಮೆ ದಿನ ಧ್ಯಾನ ಮಾಡುವುದು, ಮಾಡಿಸುವುದು.

6) ಪಿರಮಿಡ್ ಶಕ್ತಿಯನ್ನು ಅನೇಕ ವಿಧವಾಗಿ ಉಪಯೋಗಿಸಿಕೊಳ್ಳುವುದು.

7) ಔಷಧಿಗಳನ್ನು ಬಳಸದೇ ಸಾಧ್ಯವಾದಷ್ಟು ಧ್ಯಾನ ಶಕ್ತಿಯಿಂದ ರೋಗಗಳನ್ನು ಉಪಶಮನ ಮಾಡಿಕೊಳ್ಳಬೇಕು.

8) ಯಾವುದೇ ಬಗೆಯ ಮಾಂಸಾಹಾರ ಸೇವನೆಯನ್ನು ಮಾಡದಿರುವುದು, ಅದನ್ನು ಸಂಪೂರ್ಣವಾಗಿ ತಿರಸ್ಕರಿಸುವುದು.

9) ಕೇವಲ ಶಾಕಾಹಾರವನ್ನು ಸೇವಿಸಬೇಕು, ಅದೂ ಮಿತವಾಗಿ.

10) ಪ್ರತ್ಯೇಕವಾದ ಆಧ್ಯಾತ್ಮಿಕ ವಸ್ತ್ರಧಾರಣೆಯನ್ನು ಧರಿಸದಿರುವುದು.

11) ಚಿಕ್ಕ ವಯಸ್ಸಿನಿಂದಲೇ ಎಲ್ಲ ಮಕ್ಕಳಿಗೆ ಧ್ಯಾನ ಶಿಕ್ಷಣವನ್ನು ಕೊಡಬೇಕು.

12) ಶಿಷ್ಯತ್ವ ಎನ್ನುವುದಿಲ್ಲದೆ ಎಲ್ಲರೂ ಮಾಸ್ಟರ್‌ರಾಗಿ ಬೆಳೆಯುವುದು.

13) ಆಧ್ಯಾತ್ಮಿಕ ಶಿಕ್ಷಣದಲ್ಲಿ ಹಣವಿನಿಮಯ ಇರಕೂಡದು.

14) ವಿಗ್ರಹ ಪೂಜೆ, ವ್ಯಕ್ತಿಪೂಜೆ, ಮುಂತಾದವುಗಳ ಆಚರಣೆ ಬೇಡ.

15) ಅವರವರ ಸಮಸ್ಯೆಗಳನ್ನು ಅವರೇ ತಮ್ಮ ಸ್ವಂತ ಆತ್ಮಶಕ್ತಿಯನ್ನು ಉಪಯೋಗಿಸಿ ಪರಿಹರಿಸಿಕೊಳ್ಳುವುದು.

16) ಗೃಹಸ್ಥರಾಗಿ ಸಮಾಜದಲ್ಲಿ ಇರುತ್ತ ಅವರವರ ಕೆಲಸಗಳನ್ನು ಅವರೇ ಮಾಡಿಕೊಳ್ಳುತ್ತಾ, ಆತ್ಮಜ್ಞಾನವನ್ನು ಸಂಪಾದಿಸಿಕೊಳ್ಳುವುದು.

17) ಧ್ಯಾನಾನುಭವಗಳನ್ನು ತಪ್ಪದೇ ಗ್ರಂಥರೂಪದಲ್ಲಿ ಪ್ರಕಟಿಸುವುದು.

18) ಎಲ್ಲಾ ಗ್ರಾಮಗಳಲ್ಲೂ, ಎಲ್ಲಾ ಪಟ್ಟಣಗಳಲ್ಲೂ ಪಿರಮಿಡ್ ಧ್ಯಾನ ಕೇಂದ್ರಗಳನ್ನು, ಸ್ಪಿರಿಚ್ಯುವಲ್ ಸೊಸೈಟಿಗಳನ್ನು ತಪ್ಪದೆ ಸ್ಥಾಪಿಸುವುದು.

WWW.PSSMOVEMENT.ORG



PYRAMID SPIRITUAL SOCIETIES MOVEMENT, INDIA

